*The Department of Public Instruction, Bombay.*

# GEOGRAPHY

OF THE

# BIJAPUR DISTRICT

(THE KANARESE COUNTRY)

COMPILED BY

**R. S. KULKARNI, L. C. E.**

*Retired Principal of the Training College for Men, Dharwar.*

FIRST EDITION, 700 COPIES



PUBLISHED BY THE

KANARESE MISSION PRESS AND BOOK DEPOT,

MANGALORE

1922



rice : 10 As. 6 P.

ಮುಂಬಯಿ ಇಲಾಖೆಯೊಳಗಿನ ಸರಕಾರೀ ವಿದ್ಯಾಖಾತೆ.

# ವಿಜಾಪುರ ಜಿಲ್ಲೆಯ ಭೂಗೋಳವು

ಇದನ್ನು ಧಾರವಾಡ ಗಂಡುಮಕ್ಕಳ ಟ್ರೇನಿಂಗ ಕಾಲೇಜಿನ ಮಾಜಿ ಪ್ರಿನ್ಸಿಪಾಲರಾದ

**ರಾಮಚಂದ್ರ ಶ್ರೀನಿವಾಸ ಕುಲಕರ್ಣಿ, ಎಲ್. ಸಿ. ಇ.**

ಇವರು ಶಾಲಾಖಾತೆಯ ಉಪಯೋಗಕ್ಕಾಗಿ ಬರೆದರು

ಮೊದಲನೆಯ ಛಾಪೆ.



ಮಂಗಳೂರು
ಕೆನರಿಸ್ ಮಿಶ್ಯನ್ ಪ್ರೆಸ್ ಮತ್ತು ಬುಕ್ ಡಿಪೊ
೧೯೨೨



ಬೆಲೆ: ೧೦ ಆಣೆ ೬ ಪೈ.

# ಅನುಕ್ರಮಣಿಕೆ.





# ವಿಜಾಪುರ ಜಿಲ್ಲೆಯ ವರ್ಣನೆಯು

## ಉಪೋದ್ಘಾತ.

ಜಿಲ್ಹೆಯ ಭೂಗೋಲವನ್ನು ಅಭ್ಯಾಸಿಸುವ ಪೂರ್ವದಲ್ಲಿ ಶಿಕ್ಷಕರು ಹುಡುಗರಿರುವ ಗ್ರಾಮದ ಹಾಗು ತಾಲೂಕಿನ ಸಾಮಾನ್ಯಜ್ಞಾನವನ್ನು ತಕ್ಕ ಪದ್ಧತಿಯಿಂದ ಮಾಡಿಕೊಡುವದು ಅವಶ್ಯವದೆ. ಯಾಕಂದರೆ ಆ ಶಿಕ್ಷಣದಿಂದ ಪ್ರತಿ ಒಬ್ಬ ವಿದ್ಯಾರ್ಥಿಗೆ ದಿಕ್ಕುಗಳು, ಉದ್ದ ಆಳತೆಯ ಕೋಷ್ಟಕ, ಸ್ಕೇಲು, ನಕಾಶ, ಹಳ್ಳ, ನದಿ, ಗುಡ್ಡ ಮುಂತಾದ ಭೂಗೋಲದೊಳಗಿನ ಕೆಲವು ವಿಷಯಗಳು, ನಕಾಶದಲ್ಲಿ ಅವುಗಳ ಚಿಹ್ನಗಳು, ಗ್ರಾಮಗಳ ಹಾಗೂ ತಾಲೂಕುಗಳ ಅಧಿಕಾರಸ್ಥರು, ಅವರ ಕರ್ತವ್ಯಗಳು, ಇವೇ ಮೊದಲಾದ ಸಂಗತಿಗಳ ಬಗ್ಗೆ ಯಥಾರ್ಥಜ್ಞಾನವಾಗಿರಬೇಕಾಗಿರುತ್ತದೆ.

ಜಿಲ್ಹೆಯ ಭೂಗೋಲವನ್ನು ಕಲಿಸುವಾಗ ಶಿಕ್ಷಕನು ಕೇವಲ ಅಚ್ಚು ಹಾಕಿದ ನಕಾಶವನ್ನು ಅವಲಂಬಿಸದೆ, ತಾನು ಸ್ವತಃ ಮುಂದೆ ಈ ಪುಸ್ತಕದಲ್ಲಿ ಹೇಳಲ್ಪಡುವ ಬೇರೆಬೇರೆ ವಿಷಯಗಳನ್ನು ಕುರಿತು ನಕಾಶಗಳನ್ನೂ ಭೂಪ್ರತಿಮೆಗಳನ್ನೂ ಮಾಡಿಟ್ಟುಕೊಂಡಿರಬೇಕು. ಶಾಲೆಯಲ್ಲಿರುವ ನಕಾಶಗಳಲ್ಲಿ ಎಲ್ಲ ಸಂಗತಿಗಳ ಸಮಾವೇಶವಾಗಿರುವದರಿಂದ ವಿದ್ಯಾರ್ಥಿಗಳಿಗೆ ಯಾವದೊಂದು ವಿಷಯವನ್ನು ತಿಳಿಸುವಾಗ ಅದೊಂದೇ ಸಂಗತಿಯು ಅವರ ಮನಸ್ಸಿನಲ್ಲಿ ಬಿಂಬಿಸುವಂತೆ ತಿಳಿಸುವದಕ್ಕೆ ಅನುವಿರುವದಿಲ್ಲ. ಆದ್ದರಿಂದ ಆ ನಕಾಶಗಳ ಉಪಯೋಗವು ಬಹಳವಾಗಿ ಆಗುವದಿಲ್ಲ. ಭೂಮಿಯ ಪೃಷ್ಠಭಾಗದ ರಚನೆ ಅಂದರೆ, ಅಲ್ಲಿ ಹಬ್ಬಿರುವ ಪರ್ವತಗಳು, ಭೂಮಿಯ ಏರಿಳಿತಗಳು, ನದಿಗಳು, ಸರೋವರಗಳು, ಅರಣ್ಯಗಳು, ಇವೇ ಮೊದಲಾದವುಗಳನ್ನು ತೋರಿಸುವಂಥ ನಕಾಶಗಳು ಪ್ರಾಕೃತಿಕ ನಕಾಶಗಳು. ಇಂಥ ನಕಾಶಗಳಿಂದ ಬಹಳೇ ಉಪಯೋಗವಾಗುತ್ತದೆ. ಒಂದು ಪ್ರದೇಶದ ಪ್ರಾಕೃತಿಕ ಸ್ವರೂಪವನ್ನು ಲಕ್ಷ್ಯಪೂರ್ವಕವಾಗಿ ಅಭ್ಯಾಸಿಸುವದರಿಂದ, ಆ ಪ್ರದೇಶದ ಯಾವ ಭಾಗಗಳು ಅಲ್ಲಿಯ ಜನರಿಗೆ ಬಹಳ ಉಪಯೋಗವುಳ್ಳವು, ಅವರಿಗೆ ಬೇಕಾದ ಪೈರುಗಳನ್ನು

ಯಾವ ಭಾಗದಲ್ಲಿ ಬೆಳೆದುಕೊಳ್ಳಬಹುದು, ಯಾವ ಭಾಗಗಳಲ್ಲಿ ದೊಡ್ಡ
ದೊಡ್ಡ ಪಟ್ಟಣಗಳುಂಟಾಗಲಿಕ್ಕೆ ಅನುಕೂಲತೆಗಳಿವೆ, ಇವೇ ಮೊದಲಾದ ಪ್ರಶ್ನೆ
ಗಳಿಗೆ ಉತ್ತರವು ಹೊರಡುವದು. ಆದ್ದರಿಂದ ಕಲಿಸಬೇಕಾದ ಪ್ರದೇಶದ
ಪ್ರಾಕೃತಿಕ ಸ್ವರೂಪವು ಹುಡುಗರ ಕಣ್ಣಮುಂದೆ ಕಟ್ಟಿದಂತಿರುವದು ಅವಶ್ಯ
ವಾದದ್ದು. ಇದಕ್ಕೆ ಪ್ರಾಕೃತಿಕ ನಕಾಶಗಳನ್ನು ಮೇಲಿಂದ ಮೇಲೆ ನೋಡು
ವದೇ ಉತ್ತಮ ಉಪಾಯವು. ಭೂಗೋಲದ ಪಾಠವು ನಡೆದಾಗ ಎಂದಾದ
ರೊಮ್ಮೆ ಈ ತರದ ನಕಾಶಗಳನ್ನು ನೋಡಿದರೆ ತೀರದು.

ನಕಾಶಗಳನ್ನು ಮೇಲಿಂದ ಮೇಲೆ ತೆಗಿಸುವ ರೂಢಿಯನ್ನು ಇಟ್ಟು
ಭೂಗೋಲವನ್ನು ಅಭ್ಯಾಸಿಸುವದಂತೂ ಇದಕ್ಕೂ ಮೇಲ್ತರದ ಉಪಾಯವು.
ಬಾಹ್ಯರೇಖೆಯುಳ್ಳ ನಕಾಶಗಳನ್ನು ಹುಡುಗರ ಕೈಯಲ್ಲಿ ಕೊಟ್ಟು ಶಿಕ್ಷಕನು
ಕರೇ ಹಲಿಗೆಯ ಮೇಲೆ ತಾನು ತೆಗೆದ ಬಾಹ್ಯರೇಖೆಯ ನಕಾಶದಲ್ಲಿ ತುಂಬಿ
ತೋರಿಸಿದಂತೆ ಹುಡುಗರಿಂದಲೂ ಅವರವರ ನಕಾಶಗಳಲ್ಲಿ ತುಂಬಿಸಬಹುದು.
ಶಿಕ್ಷಕನು ವಿದ್ಯಾರ್ಥಿಗಳ ಎದುರಿಗೇ ನಕಾಶವನ್ನು ತೆಗೆಯುವದರಿಂದ ನಕಾಶ
ದಲ್ಲಿ ತೆಗೆದ ಸಂಗತಿಗಳು ವಿದ್ಯಾರ್ಥಿಗಳಿಗೆ ಚನ್ನಾಗಿ ತಿಳಿದು ಮನದಟ್ಟಾಗು
ತ್ತವೆ. ಶಿಕ್ಷಕನು ಹುಡುಗರಿಗೂ ತನ್ನಂತೆ ಕೆಲಸ ಮಾಡಲಿಕ್ಕೆ ಹಚ್ಚುವದರಿಂದ
ಅವರ ಕೈಗಳಿಗೂ ವ್ಯವಸಾಯ ದೊರೆತಂತಾಗುತ್ತದೆ; ಮತ್ತು ಅವರು ಸ್ವಂತ
ಮಾಡಿದ ಕೆಲಸವು ಅವರ ಮನಸ್ಸಿನಲ್ಲಿ ದೃಢವಾಗಿ ಉಳಿಯುತ್ತದೆ. ಆದ್ದರಿಂದ
ಹುಡುಗರ ಕಡೆಯಿಂದ ಮೇಲಿಂದ ಮೇಲೆ ಈ ತರದ ನಕಾಶಗಳನ್ನೂ ಮಾಡೆಲು
ಗಳನ್ನೂ ಮಾಡಿಸುವದು ಅತ್ಯುಪಯುಕ್ತವಾದದ್ದು.

ಹೊಸದಾದ ಯಾವದೊಂದು ಸಂಗತಿಯ ಜ್ಞಾನವಾಗಬೇಕಾದರೆ ಪೂರ್ವ
ದಲ್ಲಿ ಗೊತ್ತಿದ್ದ ಒಂದು ಸಂಗತಿಯ ಸಾಮ್ಯವು ಇಲ್ಲವೆ ವೈಷಮ್ಯವು ಅತ್ಯವಶ್ಯ
ವಿರುತ್ತದೆ. ಅದರಂತೆ ಜಿಲ್ಹೆಯ ಭೂಗೋಲವನ್ನು ಕಲಿಸುವಾಗ ಶಕ್ಯವಿದ್ದ
ಮಟ್ಟಿಗೆ, ಹುಡುಗರು ಈ ಮೊದಲು ಕಲಿತ ತಾಲೂಕಿನ ಭೂಗೋಲಕ್ಕೆ ಹೋ
ಲಿಸಿ ಕಲಿಸತಕ್ಕದ್ದು. ಯಾವ ಯಾವ ಸಂಗತಿಗಳನ್ನು ವಿದ್ಯಾರ್ಥಿಗಳಿಗೆ ಹೇಳ
ತಕ್ಕದ್ದು, ಯಾವವುಗಳನ್ನು ಹೇಳುವ ಕಾರಣವಿಲ್ಲ ಎಂಬದನ್ನು ಶಿಕ್ಷಕನು
ನಿರ್ಣಯಿಸಿಕೊಳ್ಳತಕ್ಕದ್ದು. ಆ ಮೇಲೆ ಹೇಳತಕ್ಕದ್ದನ್ನು ಗೊತ್ತಿದ್ದ ಸಂಗತಿಗಳಿಗೆ
ಹೋಲಿಸಿ ಹೇಳಬೇಕು. ವಿವಕ್ಷಿತ ಭೂಪ್ರದೇಶದ ಅಥವಾ ಯಾವದೊಂದು
ಪರ್ವತದ ಎತ್ತರವನ್ನು ಹೇಳಬೇಕಾದರೆ ಅವರು ಕಲಿತ ತಾಲೂಕಿನೊಳಗಿನ

ಇಂಥ ಪ್ರದೇಶಕ್ಕಿಂತ ಇಷ್ಟು ಹೆಚ್ಚು ಎತ್ತರ ಅಥವಾ ಇಷ್ಟು ಪಟ್ಟು ಎತ್ತರ ಎಂದು ಹೇಳುವದರಿಂದ ವಿಷಯವು ಚನ್ನಾಗಿ ತಿಳಿಯುತ್ತದೆ.

ಯಾವದೊಂದು ಸಿದ್ಧಾಂತವನ್ನು ಬರೇ ಬಾಯಿಯಿಂದ ಹೇಳದೆ ಪ್ರತ್ಯಕ್ಷ ಉದಾಹರಣೆಗಳಿಂದ ಹುಡುಗರಿಗೆ ತಿಳಿಸಿ ಆ ಮೇಲೆ ಅವರಿಂದ ನಿಯಮವನ್ನು ಹೊರಡಿಸಬೇಕು. ಉದಾಹರಣಾರ್ಥವಾಗಿ—'ಗೋದಿಯ ಬೆಳೆಗೆ ಸ್ವಲ್ಪ ಮಳೆ, ತಣ್ಣಗಿನ ಹವೆ (ಚಳಿ) ಇವು ಬೇಕಾಗುವವು' ಎಂಬದನ್ನು ಮೊದಲೇ ಹೇಳದೆ, ಚಳಿಗಾಲದಲ್ಲಿ—ಈಗ ಯಾವ ಯಾವ ಪೈರುಗಳು ನಿಮ್ಮ ದೃಷ್ಟಿಗೆ ಬೀಳುತ್ತವೆ? ಇವುಗಳಲ್ಲಿ ಯಾವ ಪೈರುಗಳು ಬೇರೆ ಕಾಲದಲ್ಲಿ ಆಗುವವು? ಯಾವವು ಆಗುವದಿಲ್ಲ?—ಇವೇ ಮುಂತಾದ ಪ್ರಶ್ನೆಗಳಿಂದ ಸರಿಯಾದ ಉತ್ತರ ಗಳನ್ನು ವಿದ್ಯಾರ್ಥಿಗಳಿಂದ ಹೊರಡಿಸಿಕೊಳ್ಳಬೇಕು.

ಜಿಲ್ಹೆಯೊಳಗಿನ ಪ್ರಸಿದ್ಧ ಸ್ಥಳ, ವಸ್ತು ಮುಂತಾದವುಗಳು ಸಮೀಪದಲ್ಲಿ ದ್ದರೆ, ವಿದ್ಯಾರ್ಥಿಗಳನ್ನು ಕರೆದುಕೊಂಡು ಹೋಗಿ ತೋರಿಸಿ ಅವುಗಳ ಬಗ್ಗೆ ಪ್ರತ್ಯಕ್ಷಜ್ಞಾನವನ್ನು ಮಾಡಿಕೊಡಬೇಕು. ಬೇರೆಬೇರೆ ಪ್ರಕಾರದ ಕಾರಖಾನೆ ಗಳು, ಸರಕಾರೀ ಕಚೇರಿಗಳು, ಸ್ಟೇಶನು, ನದಿಯ ಮುಖ, ಧಬಧಬೆ ಮುಂತಾ ದವುಗಳನ್ನು ತೋರಿಸಲಿಕ್ಕೆ ಶಕ್ಯವಿದ್ದರೆ, ತೋರಿಸಿ ಕಲಿಸುವದರಿಂದ ಆಗುವಷ್ಟು ಲಾಭವು ಬರೇ ಬಾಯಿಯಿಂದ ಬೇಕಾದಷ್ಟು ಹೇಳಿದರೂ ಆಗುವದಿಲ್ಲ. ವಿಜಾ ಪುರದ ಭವ್ಯ ಇಮಾರತುಗಳು, ಬಾದಾಮಿಯ ಮಹಾಕೂಟ ಮುಂತಾದವು ಗಳನ್ನು ತೋರಿಸಲಿಕ್ಕೆ ವಿದ್ಯಾರ್ಥಿಗಳನ್ನು ಕರಕೊಂಡು ಹೋದರೆ ಅನಾಯಾಸ ವಾಗಿ, ಭೂಮಿಯ ಏರಿಳಿತಗಳು, ಗುಡ್ಡಗಳು, ದೊಡ್ಡದೊಡ್ಡ ನದಿಗಳು, ಪೂಲು ಗಳು, ರೇಲ್ವೆಯ ಮಾರ್ಗ ಮುಂತಾದ ಎಷ್ಟೋ ಸಂಗತಿಗಳ ಬಗ್ಗೆ ಪ್ರತ್ಯಕ್ಷ ಜ್ಞಾನ ಮಾಡಿಕೊಡಲಿಕ್ಕೆ ಅನುಕೂಲವಾಗುತ್ತದೆ.

ಶಿಕ್ಷಕರು ಈ ಪುಸ್ತಕದಲ್ಲಿ ಬರೆದ ಯಾವತ್ತೂ ಸಂಗತಿಗಳನ್ನು ವಿದ್ಯಾರ್ಥಿ ಗಳಿಂದ ಓದಿಸಬಾರದು. ಬಹುಶಃ ಈ ಪುಸ್ತಕದೊಳಗಿನ ಎಷ್ಟೋ ಸಂಗತಿಗಳು ಶಿಕ್ಷಕರ ಉಪಯೋಗಕ್ಕಾಗಿಯೇ ಅವೆ. ಇದರೊಳಗಿನ ಯಾವದೊಂದು ವಿಷಯವನ್ನು ತಿಳಿಸುವದಾದ ಮೇಲೆ ಅದೇ ವಿಷಯವನ್ನು ಕುರಿತು ಹೇಳಿದ ಸಂಗತಿಗಳನ್ನು ಈ ಪುಸ್ತಕದಲ್ಲಿ ವಿದ್ಯಾರ್ಥಿಗಳಿಂದ ಓದಿಸಲಿಕ್ಕೆ ಅಡ್ಡಿ ಇಲ್ಲ.

## ೧ನೆಯ ಪ್ರಕರಣ.

### ವಿಜಾಪುರ ಜಿಲ್ಹೆಯ ಮೇರೆಗಳು, ಆಕಾರ, ಕ್ಷೇತ್ರ, ಪ್ರಾಕೃತಿಕ ಸ್ವರೂಪ.

ಮನುಷ್ಯನು ತನ್ನ ಅನುಕೂಲಕ್ಕಾಗಿ ಮಾಡಿಕೊಂಡ ಮೇರೆಗಳಿಗೆ ರಾಜಕೀಯ ಮೇರೆಗಳೆಂದೆನ್ನುವರು. ಹೊಳೆ, ಗುಡ್ಡದ ಸಾಲು, ಪರ್ವತ, ಸಮುದ್ರ ಮುಂತಾದವುಗಳಿಂದ ಉಂಟಾದ ಮೇರೆಗಳಿಗೆ ಸ್ವಾಭಾವಿಕ ಮೇರೆಗಳೆಂದೆನ್ನುವರು. ಈ ಎರಡೂ ತರದ ಮೇರೆಗಳನ್ನು ನೆನಪಿನಲ್ಲಿಟ್ಟುಕೊಂಡು ಈ ಜಿಲ್ಹೆಯ ಮೇರೆಗಳನ್ನು ನೋಡುವ.

**ಮೇರೆಗಳು.**—ಭೀಮಾ ನದಿಯು ಈ ಜಿಲ್ಹೆಯ ಸ್ವಾಭಾವಿಕವಾದ ಉತ್ತರ ಮೇರೆಯಾಗಿರುತ್ತದೆ. ಅದರ ಆಚೆಯಲ್ಲಿ ವಾಯವ್ಯ ಮೂಲೆಯಿಂದ ಸಿರಗೂರಿನ ವರೆಗೆ ಸೊಲ್ಲಾಪುರ ಜಿಲ್ಹೆಯೂ, ಸಿರಗೂರಿನಿಂದ ಅಗರಖೇಡದ ವರೆಗೆ ಅಕ್ಕಲಕೋಟ ಜಹಾಗೀರೂ ಇರುವವು. ಅಲ್ಲಿಂದ ಹಾಗೇ ಸ್ವಲ್ಪ ಮುಂದಕ್ಕೆ ಬಂದರೆ ನಿಜಾಮನ ರಾಜ್ಯವು ಇದರ ಉತ್ತರ ಮೇರೆಯಾಗುತ್ತದೆ. ಈ ಜಿಲ್ಹೆಯ ಇಡೀ ಪೂರ್ವದ ದಂಡೆಗೂ ದಕ್ಷಿಣದ ಸುಮಾರು ಅರ್ಧಭಾಗದ ವರೆಗೆ ಅಂದರೆ, ಬೇಲೂರಿನ ವರೆಗೆ ನಿಜಾಮನ ರಾಜ್ಯವೇ ಹತ್ತಿರುತ್ತದೆ. ಮಲಪ್ರಭಾ ನದಿಯು ದಕ್ಷಿಣ ದಿಕ್ಕಿನ ಉಳಿದ ಅರ್ಧಭಾಗದ ಮೇರೆಯಾಗಿರುತ್ತದೆ. ಈ ನದಿಯ ಆಚೆಗೆ ಬೇಲೂರಿನಿಂದ ಹಾಗನೂರಿನ ವರೆಗೆ ಧಾರವಾಡ ಜಿಲ್ಹೆಯೂ, ಅಲ್ಲಿಂದ ಮುಂದೆ ರಾಮದುರ್ಗ ಸಂಸ್ಥಾನವೂ ಹತ್ತುವವು. ಪಶ್ಚಿಮ ಮೇರೆಯಲ್ಲಿ ನೈಋತ್ಯ ಮೂಲೆಯಿಂದ ಕ್ರಮವಾಗಿ ತೊರಗಲ್ಲು, ಮುಧೋಳ, ಜಮಖಂಡಿ ಸಂಸ್ಥಾನಗಳೂ ಬೆಳಗಾಂವ ಜಿಲ್ಹೆಯೂ ಜತ್ತ ಹಾಗು ಮಂಗಳವೇಢೆಯ ಜಹಾಗೀರುಗಳೂ ಇರುವವು. (ಈ ಕಾಲಕ್ಕೆ ಶಿಕ್ಷಕರು, ಈ ಜಿಲ್ಹೆಯ ಮೇರೆಯಲ್ಲಿ ಬರುವ ಬ್ರಾಹ್ಮಣ, ಮರಾಠಿ, ಮುಸಲ್ಮಾನ ಮುಂತಾದ ಬೇರೆಬೇರೆ ಜಾತಿಯ ಸಂಸ್ಥಾನಿಕರ ಚಿತ್ರಗಳನ್ನು ತೋರಿಸಬೇಕು, ಹಾಗು ಸಂಸ್ಥಾನವೆಂದರೇನೆಂಬದನ್ನು ಸ್ವಲ್ಪದರಲ್ಲಿ ಹೇಳಬೇಕು.) ಔಂಧ ಹಾಗು ಕುರುಂದವಾಡ ಸಂಸ್ಥಾನಗಳ ಪ್ರದೇಶಗಳು ಈ ಜಿಲ್ಹೆಯ ಪಶ್ಚಿಮ ಭಾಗದಲ್ಲಿರುವ ಹೊನವಾಡ, ಕನಮಡಿ ಎಂಬ ಗ್ರಾಮಗಳಿಂದುಂಟಾದ ಸಣ್ಣ ಭಾಗವನ್ನು ಜಿಲ್ಹೆಯ ಉಳಿದ ದೊಡ್ಡ ಭಾಗದಿಂದ ಬೇರೆ ಮಾಡುತ್ತವೆ.

**ಆಕಾರ.**—ಈ ಜಿಲ್ಹೆಯ ಆಕಾರವು ಸ್ಥೂಲಮಾನದಿಂದ ಸಮಾಂತರ ದ್ವಿಭುಜ ಚೌಕೋನವಾಗಿರುತ್ತದೆ. ಈ ಜಿಲ್ಹೆಯ ದಕ್ಷಿಣೋತ್ತರ ಉದ್ದಳತೆಯು ೧೧೫ ಮೈಲೂ, ಪೂರ್ವಪಶ್ಚಿಮ ಆಗಲಳತೆಯು ೭೦ ಮೈಲೂ ಇರುವವು. ಕ್ಷೇತ್ರಫಲವು ಸುಮಾರು ೫೬೬೯ ಚೌ. ಮೈಲು ಇರುವದು. (ವಿದ್ಯಾರ್ಥಿಗಳ ತಿಳುವಳಿಕೆಗಾಗಿ ಅವರಿದ್ದ ತಾಲೂಕಿನ ಆಕಾರದ ಕಾಗದವನ್ನು ಕತ್ತರಿಸಿ, ಅದನ್ನು ಜಿಲ್ಹೆಯ ನಕಾಶದ ಮೇಲಿಟ್ಟು, ಸರಾಸರಿ ಮಾನದಿಂದ ಜಿಲ್ಹೆಯು ವಿದ್ಯಾರ್ಥಿಗಳಿರುವ ತಾಲೂಕಿನ ಎಷ್ಟು ಪಟ್ಟು ಇದೆ ಎಂಬದನ್ನು ನೋಡಲಿಕ್ಕೆ ಹಚ್ಚಬೇಕು.)

**ಸ್ವಾಭಾವಿಕ ಲಕ್ಷಣಗಳು.**—ಭೂಗೋಲದಲ್ಲಿ ಯಾವದೊಂದು ಪ್ರದೇಶದ ಎತ್ತರವನ್ನು ಫೂಟುಗಳಿಂದ ಹೇಳುವರು. ಒಂದು ಪಟ್ಟಣವು ಅಥವಾ ಪ್ರದೇಶವು ೬೦೦ ಫೂಟು ಎತ್ತರದಲ್ಲಿರುವದೆಂದರೆ, ಅದು ಸಮುದ್ರದ ಪಾತಳಿಯಿಂದ ಅಷ್ಟು ಫೂಟು ಎತ್ತರದ ಮೇಲಿದೆ ಎಂದು ತಿಳಿಯತಕ್ಕದ್ದು. ಉದಾಹರಣಾರ್ಥವಾಗಿ—ಬಾದಾಮಿಯ ಗುಡ್ಡವು ಅದರ ಅಡಿಯಿಂದ ಸುಮಾರು ೩೬೯ ಫೂಟು ಎತ್ತರದಲ್ಲಿರುವದು; ಆದರೆ ಭೂಗೋಲದಲ್ಲಿ ಈ ಗುಡ್ಡವು ಸುಮಾರು ೨೩೦೦ ಫೂಟು ಎತ್ತರದಲ್ಲಿರುವದೆಂದು ಹೇಳಿರುತ್ತದೆ. ಭೂಗೋಲದಲ್ಲಿ ಹೇಳಿದ ಎತ್ತರವು ಸಮುದ್ರದ ಪಾತಳಿಯಿಂದ ಅದರ ಎತ್ತರವೆಂದು ತಿಳಿಯತಕ್ಕದ್ದು.

ಸಮುದ್ರದ ಪಾತಳಿಯಿಂದ ೬೦೦ ಫೂಟು ಎತ್ತರದ ವರೆಗೆ ಹಬ್ಬಿದ ಪ್ರದೇಶಕ್ಕೆ ಬೈಲುಭೂಮಿ ಎನ್ನುವರು. ೬೦೦ರಿಂದ ೧೨೦೦ ಫೂಟುಗಳ ವರೆಗೆ ಎತ್ತರವುಳ್ಳ ವಿಸ್ತಾರವಾದ ಭೂಭಾಗಕ್ಕೆ 'ತಪ್ಪಲುಭೂಮಿ' ಎನ್ನುವರು. ಸುತ್ತಲಿನ ಭೂಮಿಯು ವಿಶೇಷ ಎತ್ತರವಿಲ್ಲದೆ ಅದರಲ್ಲಿಯ ಕೆಲವು ಭಾಗಗಳು ಮಾತ್ರ ಎತ್ತರವಾಗಿದ್ದರೆ ಅವುಗಳಿಗೆ ಗುಡ್ಡ ಅಥವಾ ಬೆಟ್ಟ ಎನ್ನುವರು. ಇಂಥ ಎತ್ತರವಾದ ಸ್ಥಳಗಳು ಒಂದೇ ಸವನೆ ಹಬ್ಬುತ್ತ ಹೋಗಿದ್ದರೆ ಅದಕ್ಕೆ 'ಗುಡ್ಡದ ಸಾಲು' ಎನ್ನುವರು; ಅದಕ್ಕೂ ಹೆಚ್ಚಿಗೆ ಎತ್ತರವಾದ ಪ್ರದೇಶಕ್ಕೆ 'ಪರ್ವತ' ಎನ್ನುವರು. ಒಂದು ವಿಸ್ತೀರ್ಣವಾದ ತಪ್ಪಲುಭೂಮಿಯ ಮೇಲೆ ಬೈಲುಗಳೂ ಗುಡ್ಡಗಳೂ ಇರಬಹುದೆಂಬದನ್ನು ಲಕ್ಷ್ಯದಲ್ಲಿಡುವ ಸಂಗತಿಯಾಗಿದೆ.

ಹಿಂದುಸ್ಥಾನದ ಪ್ರಾಕೃತಿಕ ಸ್ವರೂಪದ ನಕಾಶವನ್ನು ಅಥವಾ ಮಾಡೆಲನ್ನು ನೋಡಲಾಗಿ, ವಿಜಾಪುರ ಜಿಲ್ಹೆಯು ದಕ್ಷಿಣ ಹಿಂದುಸ್ಥಾನದ ಅತಿ

ವಿಸ್ತಾರವಾದ ತಪ್ಪಲುಭೂಮಿಯ ಒಂದು ಭಾಗವಾಗಿರುವದೆಂದು ಗೊತ್ತಾಗುವದು. ಈ ಜಿಲ್ಹೆಯು ಸಹ್ಯಾದ್ರಿಯಿಂದ ದೂರವಾಗಿದ್ದು ಅದರಲ್ಲಿ ಗುಡ್ಡಗಳು ಕಡಿಮೆ ಇರುವವು. ಗಿಡಗಂಟಿಗಳೂ ಅಪರೂಪ. ಆದ್ದರಿಂದ ಈ ಜಿಲ್ಹೆಯು ಬೈಲುಸೀಮೆಯಲ್ಲಿ ಎಣಿಸಲ್ಪಡುವದು. ಈ ಜಿಲ್ಹೆಯ ಭೂಮಿಯು ಪಶ್ಚಿಮದಿಂದ ಪೂರ್ವಕ್ಕೆ ಹೆಚ್ಚು ಪ್ರಮಾಣದಿಂದ, ಆಗ್ನೇಯಕ್ಕೆ ಸ್ವಲ್ಪ ಪ್ರಮಾಣದಿಂದ ಇಳಿಜಾರಾಗಿರುವದೆಂಬದು ಅದರೊಳಗಿನ ಮುಖ್ಯ ನದಿಗಳಾದ ಕೃಷ್ಣಾ, ಭೀಮಾ ಮುಂತಾದವುಗಳು ಹರಿಯುವ ಕ್ರಮವನ್ನು ನೋಡುವದರಿಂದ ಗೊತ್ತಾಗುವದು. (ಈ ಸಂಗತಿಯನ್ನು ಕಲಿಸುವಾಗ ಜಿಲ್ಹೆಯ ಹಾಗು ಅದರ ಸುತ್ತಲಿನ ಕೆಲವು ಪ್ರದೇಶದ ಪ್ರಾಕೃತಿಕ ನಕಾಶವನ್ನು ವಿದ್ಯಾರ್ಥಿಗಳ ಮುಂದೆ ಇಡತಕ್ಕದ್ದು.)

**ಸ್ವಾಭಾವಿಕ ವಿಭಾಗಗಳು.**— ಈ ಜಿಲ್ಹೆಯಲ್ಲಿ ಮುಖ್ಯವಾಗಿ ಮೂರು ಸ್ವಾಭಾವಿಕ ವಿಭಾಗಗಳು ಒಡೆದು ಕಾಣಿಸುವವು.

೧ನೆಯದು:— ಭೀಮಾ ನದಿಯ ದಕ್ಷಿಣದ ಜಲಕ್ಷೇತ್ರವು. ಇದು ಕನಮಡಿ, ತಿಕೋಟಾ, ವಿಜಾಪುರ, ಹಿಪ್ಪರಗಿ, ಅಸ್ಕಿ ಇವುಗಳ ಮೇಲಿಂದ ಹಾಯ್ದು ಹೋಗುವ ಲೈನಮಾರ್ಗಕ್ಕೂ ಭೀಮಾ ನದಿಗೂ ನಡುವೆ ಇರುವ ಪ್ರದೇಶವು. ಈ ಪ್ರದೇಶದಲ್ಲಿ ಮುಖ್ಯವಾಗಿ ಇಂಡಿ, ಸಿಂದಗಿ ಈ ತಾಲೂಕುಗಳು ಸಮಾವೇಶವಾಗುತ್ತವೆ.

೨ನೆಯದು:— ಭೀಮಾ ನದಿಯ ದಕ್ಷಿಣದ ಜಲಕ್ಷೇತ್ರಕ್ಕೂ ಕೃಷ್ಣಾ ನದಿಗೂ ನಡುವಿರುವ ಪ್ರದೇಶವು. ಇದರಲ್ಲಿ ವಿಜಾಪುರ, ಬಾಗೇವಾಡಿ, ಮುದ್ದೇಬಿಹಾಳ ಈ ಮೂರು ತಾಲೂಕುಗಳ ಪ್ರದೇಶವು ಬರುತ್ತದೆ. ಈ ಭಾಗದಲ್ಲಿ ಕೆಳಗೆ (ಅ) ಹಾಗು (ಬ) ಕಲಮುಗಳಲ್ಲಿ ವಿವರಿಸಿದ ಎರಡು ಉಪಭಾಗಗಳನ್ನು ಮಾಡಬಹುದು.

(ಅ) ಮೇಲೆ ಹೇಳಿದಂತೆ ಕನಮಡಿಯಿಂದ ಅಸ್ಕಿಯ ವರೆಗೆ ತೆಗೆದ ರೇಖೆಗೂ ಹೊನವಾಡದಿಂದ ಬಬಲೇಶ್ವರ ಬಾಗೇವಾಡಿಗಳ ಮೇಲೆ ಹಾಯ್ದು ಮುದ್ದೇಬಿಹಾಳದ ವರೆಗೆ ತೆಗೆದ ರೇಖೆಗೂ ನಡುವಿರುವ ಪ್ರದೇಶವು. ಇದಕ್ಕೆ 'ಡೋಣಿಸಾಲು ಭೂಮಿ' ಎನ್ನುವರು.

(ಬ) ಡೋಣಿಸಾಲು ಭೂಮಿಯ ದಕ್ಷಿಣಕ್ಕೆ ಇರುವ ಕೃಷ್ಣಾ ನದಿಯ ವರೆಗಿನ ಭೂಮಿಯು.

೩ನೆಯದು:—ಕೃಷ್ಣಾ ನದಿಯ ದಕ್ಷಿಣಕ್ಕಿರುವ ಪ್ರದೇಶವು.—ಇದರಲ್ಲಿ ಬಾಗಲಕೋಟೆ, ಬಾದಾಮಿ, ಹುನಗುಂದ ಈ ಮೂರು ತಾಲೂಕುಗಳ ಪ್ರದೇಶವು ಬರುತ್ತದೆ. ಈ ಮೂರು ತಾಲೂಕುಗಳಿಗನುಸರಿಸಿ ಮೂರು ಸ್ವಾಭಾವಿಕ ವಿಭಾಗಗಳು ಕಾಣುವವು.

(ಅ) ಪಶ್ಚಿಮ ಭಾಗದಲ್ಲಿ ಬಾಗಲಕೋಟೆ ತಾಲೂಕಿನ ವಿರಲಗುಡ್ಡಗಳ ಪ್ರದೇಶ.

(ಬ) ಬಾದಾಮಿ ತಾಲೂಕಿನ ದಟ್ಟಾದ ಗುಡ್ಡಗಳ ಪ್ರದೇಶ.

(ಕ) ಹುನಗುಂದ ತಾಲೂಕಿನ ಬೈಲುಭೂಮಿ.

ಇನ್ನು ಮೇಲೆ ಹೇಳಿದ ೧ನೇ, ೨ನೇ, ೩ನೇ ಈ ಒಂದೊಂದು ಭಾಗದ ಸ್ವಾಭಾವಿಕ ಲಕ್ಷಣವನ್ನು ಅಭ್ಯಾಸಿಸುವ—

೧ನೆಯ ಭಾಗ.—ಭೀಮಾ ನದಿಯ ದಕ್ಷಿಣದ ಜಲಕ್ಷೇತ್ರ.—ಈ ಭಾಗದ ಭೂಮಿಯು ತೆರೆಗಳಂತೆ ಅನೇಕ ತಗ್ಗುದಿನ್ನೆಗಳುಳ್ಳದ್ದು. ಹೊರ್ತಿಯ ಹತ್ತರ ಸುಮಾರು ೯ ಚೌ. ಮೈಲು ಪ್ರದೇಶವು ಸಣ್ಣಸಣ್ಣ ಗುಡ್ಡಗಳುಳ್ಳದ್ದಿರುತ್ತದೆ. ಈ ಗುಡ್ಡಗಳು ನೆಲದಿಂದ ಸುಮಾರು ೧೨೫ ಫೂಟು ಎತ್ತರವಿರುವವು. ಇವುಗಳ ಮೇಲೆ ಹುಲ್ಲಿನ ಹೊರತು ಮತ್ತೇನೂ ಬೆಳೆಯುವದಿಲ್ಲ. ಈ ಭಾಗದ ಭೂಮಿಯು 'ತ್ರಾಪ'* ಎಂಬ ಶಿಲೆಯಿಂದ ಆಗಿರುವದು. ದಿನ್ನೆಗಳಲ್ಲೆಲ್ಲ ಕಲ್ಲುಭೂಮಿ ಇರುವದು. ತಗ್ಗುಗಳಲ್ಲಿ ಉರುಟಾದ ಮಣ್ಣು ಇರುವದು. ಭೀಮಾ ನದಿಯ ದಂಡೆಗುಂಟ ಸುಮಾರು ೪-೫ ಮೈಲುಗಳ ವರೆಗೆ ಮಾತ್ರ ಎರೆಭೂಮಿಯು ಕಾಣುವದು. (ಇಲ್ಲಿ ವಿದ್ಯಾರ್ಥಿಗಳಿಗೆ ತ್ರಾಪ ಶಿಲೆಯ ಹಾಗು ಉರುಟು ಮಣ್ಣಿನ ಮಾದರಿಗಳನ್ನು ತೋರಿಸತಕ್ಕದ್ದು.) ಈ ಭಾಗದ ದಿನ್ನೆಗಳೆಲ್ಲ ವಿಶೇಷವಾಗಿ ಮರಡಿಯ ಸಾಲುಗಳೇ ಆಗಿರುವವು. ಅಲ್ಲಲ್ಲಿಗೆ ವಿಸ್ತಾರವಾದ ಕಲ್ಲಿನ ಹಾಸಿಗೆಗಳನ್ನು ಕಾಣಬಹುದು. ತಗ್ಗಿನಲ್ಲಿ ಮಾತ್ರ ಅಲ್ಪಸ್ವಲ್ಪ ಬೆಳೆ ಬರುವದು. ಈ ಭಾಗದಲ್ಲಿ ಕೆಲಕೆಲವು ಕಡೆಯಲ್ಲಿ ತಗ್ಗು ಇದ್ದಲ್ಲಿ ಭತ್ತವು ಬೆಳೆಯುವದು.

೨ನೆಯ ಭಾಗ.—ಡೋಣಿಸಾಲ ಭೂಮಿ ಹಾಗು ಕೃಷ್ಣೆಯ ಉತ್ತರದ ಜಲಕ್ಷೇತ್ರ:—ಡೋಣಿಸಾಲು ಭೂಮಿಯು ದಕ್ಷಿಣದಿಂದ ಉತ್ತರಕ್ಕೆಡೋಣಿಯ

---

* ಟೀಪು:—ತ್ರಾಪ ಎಂದರೆ ಪಾವಟಿಗೆಯ ಆಕಾರದ ಥರಗಳುಳ್ಳ ಶಿಲೆ. ಇದು ಒಂದಾನೊಂದು ಕಾಲದಲ್ಲಿ ಈ ಭೂಭಾಗದಲ್ಲಿ ಹೊರಬಿದ್ದ ಜ್ವಾಲಾಮುಖಿಗಳಿಂದ ಹೊರಬಿದ್ದ ಲಾವ್ಹಾ ರಸದಿಂದ ಉತ್ಪನ್ನವಾಗಿರುತ್ತದೆ. ಇದರ ಘಟಕಗಳು ಕಣಶಿಲೆಯಂತೆಯೇ ಇದ್ದು ತುಸು ಹಸುರು ಅಥವಾ ಕಪ್ಪು ಬಣ್ಣದವಿರುತ್ತವೆ.

ಕಡೆಗೆ ಇಳಿಜಾರಾಗುತ್ತ ಹೋಗಿರುವದೆಂಬದು ಅದಕ್ಕೆ ಕೂಡುವ ಹಳ್ಳಗಳಿಂದಲೇ ಗೊತ್ತಾಗುವದು. ಈ ಭೂಮಿಯಾದರೂ 'ತ್ರಾಪ' ಶಿಲೆಯಿಂದಲೇ ಆಗಿರುವದು. ಆದರೆ ಮಣ್ಣು ತಕ್ಕಷ್ಟು ಜಿನಗಾಗಿರುವದು. ಕಲ್ಲುಭೂಮಿಯು ಕಡಿಮೆ, ಎತ್ತರದ ಪ್ರದೇಶಗಳಲ್ಲಿ ಗರಸಿನ ಭೂಮಿಯನ್ನು ಕಾಣಬಹುದು. ಬೈಲಿನಲ್ಲಿ ನಿಂತು ಸುತ್ತುಮುತ್ತು ನೋಡುವವನಿಗೆ ಕ್ಷಿತಿಜದ ವರ್ತುಲವು ಅವಿಚ್ಛಿನ್ನವಾಗಿ ಕಾಣುವದು. ಎತ್ತ ನೋಡಿದತ್ತ ಬೈಲೇ ಬೈಲು. ಈ ಭಾಗದಲ್ಲಿ ಗಿಡಗಳು ಕಡಿಮೆ. ಮನೆಗಳು ಕಲ್ಲಿನಿಂದ ಕಟ್ಟಲ್ಪಟ್ಟಿರುವವು. ಮಾಳಿಗೆಗಳು ಮೇಲು ಮುದ್ದೆಯವು. ಹಂಚಿನ ಮಾಳಿಗೆಗಳು ಇಲ್ಲವೇ ಇಲ್ಲ. ನದೀ ತೀರಗಳ ಹೊರತು ಈ ಭಾಗದಲ್ಲಿ ಕೆಲಕೆಲವು ಕಡೆಗೆ ನೀರಿನ ದುರ್ಭಿಕ್ಷವಾಗುವದು. ಈ ಸೀಮೆಯ ಹವೆಯು ಬಲು ಆರೋಗ್ಯಕರವಾದದ್ದು. ಭೂಮಿಯು ಚೆನ್ನಕ್ಕೆ ಸರಿಯಾದದ್ದೆಂದು ಹೇಳಬಹುದು. ಈ ಬೈಲುಸೀಮೆಯ ಕರೇಭೂಮಿಗೆ ಬೇಕಾದ ಹಾಗೆ ಮಳೆಯಾದರೆ ಒಕ್ಕಲಿಗನು ಕುಬೇರನಾಗುವನು. 'ಡೋಣಿ ಬೆಳೆದರೆ ಓಣಿಯಲ್ಲಿ ಜೋಳ'ವೆಂಬ ಗಾದೆಯು ಪ್ರಸಿದ್ಧವಿರುವದು.

ಡೋಣಿಸಾಲು ಭೂಮಿಯ ದಕ್ಷಿಣಕ್ಕಿರುವ ಕೃಷ್ಣಾ ನದಿಯ ಉತ್ತರದ ಜಲಕ್ಷೇತ್ರದ ಪ್ರದೇಶವಾದರೂ ಹೀಗೆಯೇ ಇರುವದು.

೩ನೆಯ ಭಾಗ.—ಕೃಷ್ಣಾ ನದಿಯ ದಕ್ಷಿಣದ ಸೀಮೆ:—ಈ ಭಾಗದೊಳಗಿನ ಭೂಮಿಯು ದಕ್ಷಿಣದಿಂದ ಉತ್ತರಕ್ಕೆ ಕೃಷ್ಣಾ ನದಿಯ ಕಡೆಗೆ ಇಳಿಜಾರಾಗಿರುತ್ತದೆಂಬದು ಅದಕ್ಕೆ ಕೂಡುವ ಘಟಪ್ರಭಾ, ಮಲಾಪಹಾರಿ ನದಿಗಳ ಪ್ರವಾಹಗಳಿಂದಲೂ ಬೇರೆ ಹಳ್ಳಗಳು ಹರಿಯುವ ಮಾರ್ಗಗಳಿಂದಲೂ ತಿಳಿಯುವದು. ಆದರೆ ಈ ಭಾಗದಲ್ಲಿ ಗುಡ್ಡಗಳು ಬಹಳ. ಅವು ಯಾವವೆಂದರೆ—

೧. ಕುಂದರಗಿಯ ಗುಡ್ಡದ ಸಾಲು. ಇದು ಕುಂದರಗಿಯಿಂದ ಅನಗವಾಡಿಯ ವರೆಗೆ ಬಂದು, ಆಗ್ನೇಯ ದಿಕ್ಕಿಗೆ ಅಮೀನಗಡದ ವರೆಗೆ ಹೋಗಿರುತ್ತದೆ.

೨. ಬಾದಾಮಿಯ ಗುಡ್ಡದ ಸಾಲು. ಈ ಗುಡ್ಡದ ಸಾಲು ಬೆಳಗಾಂವ ಜಿಲ್ಹೆಯೊಳಗಿಂದ ಮಲಾಪಹಾರಿ ನದಿಯ ಉತ್ತರ ದಂಡೆಗುಂಟ ಬಂದು ಚೊಳಚಗುಡ್ಡದ ಹತ್ತರ ಇಬ್ಭಾಗವಾಗಿ ಒಂದು ಉತ್ತರದ ಕಡೆಗೆ ಅಮೀನಗಡದ ವರೆಗೆ ಹೋಗಿರುತ್ತದೆ; ಎರಡನೆಯದು ಧಾರವಾಡ ಜಿಲ್ಹೆಯಲ್ಲಿಯ ಗಜೇಂದ್ರಗಡದಲ್ಲಿ ಮುಗಿದಿರುತ್ತದೆ. ಇವೆರಡೂ ಟಿಸಿಲುಗಳ ನಡುವಿರುವ ಪ್ರದೇಶವು ಬಲು ಗುಡ್ಡಗಾಡು.

೩. ಬೀಳಗಿಯ ಗುಡ್ಡದ ಸಾಲು. ಇದು ಅಮಲಝರಿಯಿಂದ ಪ್ರಾರಂಭ ವಾಗಿ ಬೀಳಗಿ, ಹೆರಕಲ್ಲು, ಅಚನೂರು ಇವುಗಳ ಮೇಲಿಂದ ಸೀತೆಯ ಮನೆಯ ವರೆಗೆ ಹೋಗಿರುತ್ತದೆ. ಈ ಗುಡ್ಡದ ಎಡಬಲದ ಭೂಮಿಯು ಬೈಲಾಗಿದ್ದು ಒಳ್ಳೇ ಬೆಳೆಯುಳ್ಳದ್ದಿರುವದು.

ಕುಂದರಗಿಯಿಂದ ಅಮಿೀನಗಡದ ವರೆಗಿನ ಗುಡ್ಡದ ದಕ್ಷಿಣ ಭಾಗದ ಭೂಮಿಯಲ್ಲಿ ಬಟಕುರ್ಕಿಯಿಂದ ಕಮತಿಗಿಯ ತನಕ ತೆಗೆದ ರೇಖೆಯ ವರೆಗೆ ಸಮನೆಲದ ಕರೇಭೂಮಿಯ ಪ್ರದೇಶಗಳು ವಿಶೇಷವಾಗಿರುವವು. ಗುಡ್ಡದ ಹತ್ತರಿರುವ ಪ್ರದೇಶಗಳು ಮಾತ್ರ ಕೆಂಪು ನೆಲಗಳಾಗಿರುವವು. ಈ ನೆಲದ ಬುಡದಲ್ಲಿ ವಿಕೃತಶಿಲೆಗಳಾದ* ಪಾಟಿಯ ಕಲ್ಲುಗಳೂ, ಸುಣ್ಣದ ಕಲ್ಲುಗಳೂ ಇರುವವು. (ಇಲ್ಲಿ ವಿದ್ಯಾರ್ಥಿಗಳಿಗೆ ಆಯಾ ಕಲ್ಲುಗಳ ಮಾದರಿಗಳನ್ನು ತೋರಿಸತಕ್ಕದ್ದು.) ಬಟಕುರ್ಕಿಯಿಂದ ಕಮತಿಗಿಯ ವರೆಗೆ ತೆಗೆದ ರೇಖೆಯ ದಕ್ಷಿಣಕ್ಕೆಲ್ಲ ಮಸಾರಿಯ ಭೂಮಿಯು ಬಹಳ. ಈ ಭೂಮಿಯು ಬಾದಾಮಿಯ ಕಲ್ಲಿನಂಥ ಉಸುಬಿನ ಕಲ್ಲುಗಳು ಸವಿದು ಆಗಿರುತ್ತದೆ. (ಇಲ್ಲಿ ಬಾದಾಮಿಯ ಕಲ್ಲು ಹಾಗು ಉಸುಬು ಕೂಡಿದ ಕೆಂಪು ಮಣ್ಣು ತೋರಿಸಬೇಕು.) ಈ ಗುಡ್ಡಗಳ ಮೇಲೆ ಗಿಡಗಳು ತಕ್ಕಷ್ಟು ಎತ್ತರವಾಗಿ ಬೆಳೆದದ್ದರಿಂದ ಗುಡ್ಡಗಳು ಹಚ್ಚಗೆ ಕಾಣುತ್ತವೆ†.

ಈ ಭಾಗದ ಭೂಮಿಯಲ್ಲಿ ಎರಡು ಪ್ರಕಾರದ ಪ್ರದೇಶಗಳು ಕಾಣುವವು. ಕುಂದರಗಿಯ ಗುಡ್ಡದ ಸಾಲಿನ ಗುಂಟ ಇಲಕಲ್ಲಿನ ವರೆಗೆ ಉತ್ತರಕ್ಕೆ ಇರುವ ಭಾಗವು ಉರುಟು ಕರೇಭೂಮಿಯಾಗಿರುತ್ತದೆ. ಅದರಲ್ಲಿಯ ಪೂರ್ವದ ಕಡೆಯ ಹುನಗುಂದ ತಾಲೂಕಿನ ಪ್ರದೇಶವು ಸಣ್ಣ ಎರೆಯ ಪ್ರದೇಶವಾಗಿರುತ್ತದೆ.

ಗುಡ್ಡಗಳು.— ಈ ಜಿಲ್ಹೆಯ ಉತ್ತರಕ್ಕೆ ಇಂಡೀ ತಾಲೂಕಿನಲ್ಲಿ ಹೊರ್ತಿಯ ಗುಡ್ಡಗಳಿರುತ್ತವೆ. ಈ ಗುಡ್ಡಗಳು ಸುಮಾರು ೯ ಮೈಲು ಚಚ್ಚೌಕು ಭೂಮಿಯನ್ನು ವ್ಯಾಪಿಸಿರುವವು. ಇವು ನೆಲದಿಂದ ಸುಮಾರು ೨೫೦ ಫೂಟಿಗಿಂತ ಎಲ್ಲಿಯೂ ಹೆಚ್ಚು ಎತ್ತರವಾಗಿಲ್ಲ. ದೂರದಿಂದ ನೋಡಿದರೆ ದೊಡ್ಡ

---

* ವಿಕೃತಶಿಲೆಗಳೆಂದರೆ—ಮೊದಲು ನೀರಿನಲ್ಲಿ ಕೂಡಿದ ಮಣ್ಣು ರೇವೆ ಗಟ್ಟಿ ನಿಂತು, ಆ ಮೇಲೆ ಅದಕ್ಕೆ ಭೂಮಿಯೊಳಗಿರುವ ಶಕೆ ಹತ್ತಿ ವಿಕಾರ ಹೊಂದಿದ ಶಿಲೆ.

† ಟೀಪು:—ಈ ತರದ ಗುಡ್ಡಗಳಿದ್ದಲ್ಲಿ ಗಿಡಗಳು ಏಕೆ ವಿಪುಲವಾಗಿ ಬೆಳೆಯುವವೆಂಬದನ್ನು ಪ್ರಶ್ನೆಗಳಿಂದ ಹೊರಡಿಸಬಹುದು.

ಮರಡಿಯಂತೆ ಕಾಣುತ್ತವೆ. ಇವು ತ್ರಾಪ ಶಿಲೆಗಳಿಂದ ಆಗಿರುವವು. ಇವು ಗಳ ಮೇಲೆ ಹುಲ್ಲಿನ ಹೊರತು ಬೇರೆ ಗಿಡಗಂಟಿಗಳು ಕಾಣುವದಿಲ್ಲ. ಈ ಗುಡ್ಡವು ಹೊರ್ತಿಯ ಹತ್ತರ ಸಮುದ್ರಸಪಾಟಿಯಿಂದ ೨೦೦೦ ಫೂಟು ಎತ್ತರ ವಾಗಿರುವದು.

೧. ಬೀಳಗಿಯ ಗುಡ್ಡದ ಸಾಲು. ಇದು ಮುಧೋಳ ಸಂಸ್ಥಾನದೊಳ ಗಿಂದ ಬಂದಿರುತ್ತದೆ. ಅಮಲಝುರಿಯಿಂದ ಬೀಳಗಿಯ ವರೆಗೆ ಇದರ ಉದ್ದಳ ತೆಯು ೧೭ ಮೈಲು ಇರುವದು. ಅಗಲಳತೆಯು ಸರಾಸರಿ ೩ ಮೈಲು ಇರು ವದು. ಬೀಳಗಿಯ ಹತ್ತರ ಈ ಗುಡ್ಡವು ಸುತ್ತುಮುತ್ತಲಿನ ನೆಲದಿಂದ ಸುಮಾರು ೩೭೦ ಫೂಟು ಎತ್ತರವಿರುವದು. ಈ ಗುಡ್ಡವು ಉಸುಬಿನ ಕಲ್ಲು ಗಳಿಂದ ಆಗಿರುತ್ತದೆ. ಇಲ್ಲಿಂದ ಮುಂದೆ ಸ್ವಲ್ಪ ಅಂತರದ ಮೇಲೆ ಮತ್ತೆ ಪ್ರಾರಂಭವಾಗಿ ನೆಟ್ಟಗೆ ಪೂರ್ವಕ್ಕೆ ಅಚನೂರಿನ ವರೆಗೆ (೧೪ ಮೈಲು) ಹೋಗಿ ಅಲ್ಲಿಂದ ಈಶಾನ್ಯಕ್ಕೆ ತಿರುಗಿ ಸೀತೆಯಮನೆಯ ಹತ್ತರ ಕೃಷ್ಣಾ ನದಿಯ ದಂಡೆಯ ವರೆಗೆ ೭ ಮೈಲು ಹಬ್ಬಿರುತ್ತದೆ. ಈ ಸಾಲು ಹೆರಕಲ್ಲಿನ ಹತ್ತರ ಘಟಪ್ರಭಾ ನದಿಯಿಂದ ಒಡೆಯಲ್ಪಟ್ಟು ಅಲ್ಲಿ ಭವ್ಯವಾದ ಒಂದು ಖಿಂಡಿಯಾಗಿ ರುತ್ತದೆ.

೨. ಕುಂದರಗಿಯ ಗುಡ್ಡದ ಸಾಲು. ಈ ಗುಡ್ಡದ ಸಾಲು ಮುಧೋಳ ಸಂಸ್ಥಾನದೊಳಗಿಂದ ಈ ಜಿಲ್ಲೆಗೆ ಬಂದು ಕುಂದರಗಿಯ ಹತ್ತರ ಮುಗಿಯು ವದು; ೭ ಮೈಲು ಉದ್ದವಾಗಿರುವದು. ಮತ್ತೆ ಅನಗವಾಡಿಯಿಂದ ಪ್ರಾರಂಭ ವಾಗಿ ಆಗ್ನೇಯ ದಿಕ್ಕಿಗೆ ಅಮೀನಗಡದ ವರೆಗೆ ೨೩ ಮೈಲು ಉದ್ದ ಹೋಗಿರು ವದು. ಬಾಗಲಕೋಟೆಯ ಹತ್ತರ ಘಟಪ್ರಭಾ ನದಿಯು ಈ ಗುಡ್ಡದ ಸಾಲನ್ನು ಒಡೆದು ಹೋಗಿರುವದು. ಈ ಗುಡ್ಡದ ಸಾಲು ಸುತ್ತುಮುತ್ತಲಿನ ನೆಲದಿಂದ ಸುಮಾರು ೨೦೦ ಫೂಟು, ಸಮುದ್ರಸಪಾಟಿಯಿಂದ ಸುಮಾರು ೨೨೦೦ ಫೂಟು ಎತ್ತರವಾಗಿರುವದು.

೩. ಬಾದಾಮಿಯ ಗುಡ್ಡದ ಸಾಲು. ಈ ಸಾಲು ರಾಮದುರ್ಗ ಸಂಸ್ಥಾನ ದೊಳಗಿಂದ ಬಂದು ಕಾಕನೂರಿಂದ ಚೊಳಚಗುಡ್ಡದ ವರೆಗೆ ೨೨ ಮೈಲು ಉದ್ದವಾಗಿ ಹಬ್ಬಿರುತ್ತದೆ. ಮುಂದೆ ಬೇಲೂರಿನ ಹತ್ತರ ಮಲಾಪಹಾರಿ ನದಿಯು ಹಾಯುವಲ್ಲಿ ಇಬ್ಭಾಗವಾಗಿ ಮುಂದೆ ಹಾಗೇ ಧಾರವಾಡ ಜಿಲ್ಲೆ ಯಲ್ಲಿ ಗಜೇಂದ್ರಗಡದ ವರೆಗೆ ಹೋಗಿ ಮುಗಿದಿರುತ್ತದೆ. ಈ ಗುಡ್ಡವು ಸುತ್ತ

ಲಿನ ನೆಲದಿಂದ ಚೊಳಚಗುಡ್ಡದ ಹತ್ತರ ೪೦೦ ಫೂಟು ಎತ್ತರವಾಗಿರುವದು. ಮುಂದೆ ಈ ಗುಡ್ಡವು ಬಾದಾಮಿಯ ತಾಲೂಕಿನ ತುಂಬ ಹಬ್ಬಿರುವದು.

ಕೃಷ್ಣಾ ನದಿಯ ದಕ್ಷಿಣಕ್ಕಿರುವ ಎಲ್ಲ ಗುಡ್ಡಗಳೂ ಒಂದೇ ಪ್ರಕಾರದ ಲಕ್ಷಣಗಳುಳ್ಳವಾಗಿರುವವು. ಅಂದರೆ ಅವುಗಳ ಮೇಲೆ ಸಣ್ಣಸಣ್ಣ ಗಿಡಗಂಟಿಗಳು ವಿಶೇಷವಾಗಿದ್ದು ಕಂದರಗಳಲ್ಲಿ ಮಾತ್ರ ಇಮಾರತಿಗೆ ಉಪಯೋಗವಾಗುವ ಎತ್ತರವಾದ ಬೇವಿನಮರಗಳು ಕಾಣುವವು. ಈ ಗುಡ್ಡಗಳು ಬಾದಾಮಿಯ ಕಲ್ಲಿನಂಥ ಉಸುಬಿನ ಕಲ್ಲಿನಿಂದಾಗಿರುವವು.

---

## ೨ನೆಯ ಪ್ರಕರಣ.

### ಹವೆಯೂ, ಮಳೆಯೂ.

ಒಂದು ಪ್ರದೇಶವು ಹೆಚ್ಚು ಎತ್ತರದಲ್ಲಿದ್ದಂತೆ ಅಲ್ಲಿ ತಂಪು ಹೆಚ್ಚು ಇರುತ್ತದೆಂಬದು ಹವೆಯ ಬಗ್ಗೆ ಸರ್ವಸಾಮಾನ್ಯವಾದ ನಿಯಮವಿರುತ್ತದೆ. ಇದರಿಂದ ಈ ಜಿಲ್ಹೆಯ ಹವೆಯ ಮಾನವನ್ನು ಸಾಮಾನ್ಯವಾಗಿ ಊಹಿಸಬಹುದು. ಈ ಜಿಲ್ಹೆಯು ಸಮುದ್ರದಿಂದ ದೂರ ಇರುವದರಿಂದಲೂ ಮಳೆಯ ಗಾಳಿಗಳು ಸಹ್ಯಾದ್ರಿಯನ್ನು ದಾಟಿ ಬರುವಾಗ ತಮ್ಮಲ್ಲಿಯ ಆರ್ದ್ರತೆಯನ್ನು ಕೆಲಮಟ್ಟಿಗೆ ಕಳಕೊಂಡಿರುವದರಿಂದಲೂ, ಈ ಜಿಲ್ಹೆಯಲ್ಲಿ ಅಡವಿಗಳು ಇಲ್ಲದ್ದರಿಂದಲೂ ಇಲ್ಲಿಯ ಹವೆಯಲ್ಲಿ ಆರ್ದ್ರತೆಯು ತೀರ ಕಡಿಮೆ ಇರುವದು. ಬೇಸಿಗೆಯಲ್ಲಿ ಇಲ್ಲಿರುವಷ್ಟು ಶಕೆಯೂ ಚಳಿಗಾಲದಲ್ಲಿ ಇಲ್ಲಿರುವಷ್ಟು ಚಳಿಯೂ ಮುಂಬಯಿ ಕರ್ನಾಟಕದ ಬೇರೆ ಯಾವ ಭಾಗದಲ್ಲಿಯೂ ಇಲ್ಲ. ಈ ಜಿಲ್ಹೆಯ ಚಳಿಯ ನಿಕೃಷ್ಟಮಾನವು ದಶಂಬರ (ಕಾರ್ತಿಕ, ಮಾರ್ಗಶಿರ) ತಿಂಗಳಲ್ಲಿ ೪೮ ಅಂಶ ಇರುತ್ತದೆ. ವರ್ಷದೊಳಗಿನ ಪರಮಾವಧಿ ಶಕೆಯ ಮಾನವು ಎಪ್ರಿಲ್ (ಚೈತ್ರ ವೈಶಾಖ) ತಿಂಗಳಲ್ಲಿ ೧೧೦ ಅಂಶ ಇರುತ್ತದೆ. (ಇಲ್ಲಿ ಶಿಕ್ಷಕರು ವಿದ್ಯಾರ್ಥಿಗಳಿಗೆ ಉಷ್ಣತಾಮಾಪಕಯಂತ್ರವನ್ನು ತೋರಿಸಿ, ಹವೆಯ ಉಷ್ಣತೆಯಲ್ಲಿ ಹೆಚ್ಚು ಕಡಿಮೆಯಾದಂತೆ ಅದರೊಳಗಿನ ಪಾರಜವು ಮೇಲೆ ಇಲ್ಲವೆ ಕೆಳಗೆ ಆಗುವದನ್ನು ತೋರಿಸಬೇಕು; ಹಾಗು ಅಂಶವೆಂದರೇನೆಂಬದನ್ನಾದರೂ ತಿಳಿಸಿ ಹೇಳಬಹುದು.)

ಈ ಜಿಲ್ಹೆಯ ಮಳೆಯ ಪ್ರಮಾಣವು ಕಡಿಮೆ ಇರುವದು. ವರ್ಷದಲ್ಲಿ ಸುಮಾರು ೨೦ ಇಂಚಿಗಿಂತ ಹೆಚ್ಚು ಮಳೆಯಾಗುವದಿಲ್ಲ. 'ಒಂದು ಇಂಚು ಮಳೆ' ಎಂದರೆ, ಒಂದು ವಿಶಿಷ್ಟ ಪ್ರದೇಶದಲ್ಲಿ ಬಿದ್ದ ನೀರು ಇಂಗದೆ ಅಥವಾ ಹರಿದುಹೋಗದೆ ಇದ್ದರೆ ಆ ಭಾಗದಲ್ಲೆಲ್ಲ ಒಂದು ಇಂಚು ಎತ್ತರ ನಿಲ್ಲುವದೆಂಬರ್ಥವು*. ಈ ಸೀಮೆಯಲ್ಲಿ ಮುಂಗಾರಿಯ ಮಳೆಗಿಂತ ಹಿಂಗಾರಿಯ ಮಳೆಯು ಹೆಚ್ಚು ನಿಯಮಿತವಾದದ್ದು. ಕಾರಹುಣ್ಣಿವೆಯಿಂದ ಶ್ರಾವಣ ಮಾಸದ ವರೆಗೆ ಆಗುವ ಮಳೆಯು ಮುಂಗಾರೀ ಮಳೆಯು. ಭಾದ್ರಪದ ಮಾಸದ ಪ್ರಾರಂಭದಿಂದ

---

* ಟೀಪು:—ಶಿಕ್ಷಕರು ಮಳೆ ಅಳೆಯುವ ಯಂತ್ರವನ್ನು ಅಥವಾ ತಾವೇ ಮಾಡಿದ ಅದರದೊಂದು ಮಾದರಿಯನ್ನು ತೋರಿಸಬಹುದು.

ಕಾರ್ತಿಕ ಮಾಸದ ವರೆಗೆ ಆಗುವ ಮಳೆಯು ಹಿಂಗಾರೀ ಮಳೆಯು. ಒಕ್ಕಲಿಗನು ಹಿಂಗಾರೀ ಮಳೆಯನ್ನು ನಂಬಿದಷ್ಟು ಮುಂಗಾರೀ ಮಳೆಯನ್ನು ನಂಬುವದಿಲ್ಲ. ಎಲ್ಲ ಕಡೆಯಲ್ಲಿ ಕೆರೆ ಬಾವಿಗಳಿಗೆ ಹಿಂಗಾರಿಯ ಮಳೆಯಿಂದಲೇ ನೀರು ವಿಶೇಷವಾಗಿ ಬರುವದು. ಈ ಜಿಲ್ಹೆಯಲ್ಲಿ ಹಿಂಗಾರಿಯ ಮಳೆಗಳು ಒಳ್ಳೇ ಬಲವಾಗಿ ಆಗುವವು. ಹೊಳೆಗಳು ಮಾತ್ರ ಮುಂಗಾರಿಯ ಮಳೆಯಿಂದ ತುಂಬುವವು. ಯಾಕಂದರೆ ಹೊಳೆಗಳ ಉಗಮಸ್ಥಾನದಲ್ಲಿ ಮುಂಗಾರಿಯ ಮಳೆಗಳೇ ವಿಶೇಷವಾಗಿ ಆಗುವವು.

ಎಪ್ರಿಲ್, ಮೇ (ಚೈತ್ರ, ವೈಶಾಖ) ತಿಂಗಳುಗಳಲ್ಲಿ ಈ ಜಿಲ್ಹೆಯೊಳಗೆ ವಿಶೇಷವಾಗಿ ಉತ್ತರಭಾಗದ ಸೀಮೆಯಲ್ಲಿ ನೆಲವು ಬಹಳ ಕಾಯ್ದು ಗಾಳಿಗಳು ಉತ್ಪನ್ನವಾಗುವವು. ಎದುರುಬದುರಾಗಿ ಬೀಸುವ ಗಾಳಿಗಳು ಒಂದಕ್ಕೊಂದು ಕೂಡಲು ಸುಟ್ಟರಗಾಳಿಗಳು ಹುಟ್ಟುವವು. ಅವುಗಳಿಂದ ಒಮ್ಮೊಮ್ಮೆ ದೊಡ್ಡದೊಡ್ಡ ಮರಗಳು ಸಹ ಕಡಕೊಂಡು ಬೀಳುವವು. ಈ ಗಾಳಿಯ ಸಂಗಡ ಮಣ್ಣು, ಉಸುಬು ಹಾರಿಹೋಗುವದರಿಂದ ಪ್ರವಾಸಿಕರಿಗೆ ಮಧ್ಯಾಹ್ನದ ತರುವಾಯ ಹಾದೀ ನಡೆಯುವದು ಬಹಳ ಕಷ್ಟವಾಗುವದು. ಈ ಗಾಳಿಗಳು ಬೀಸುವದರಿಂದ ಸಾಯಂಕಾಲಕ್ಕೆ ಮನುಷ್ಯರಿಗೆ ಶಕೆಯ ತಾಪವು ತುಸು ಕಡಿಮೆಯಾಗುವದು. ಈ ಕಾಲದಲ್ಲಿ ಜನರು ಮನೆಯ ಮುಂದಿನ ಅಂಗಳದಲ್ಲಿ ವಿಶ್ರಾಂತಿ ತೆಗೆದುಕೊಳ್ಳುವರು.

ಆರೋಗ್ಯದ ದೃಷ್ಟಿಯಿಂದ ಈ ಜಿಲ್ಹೆಯ ಹವೆಯು ಎಲ್ಲಕ್ಕೂ ಮೇಲಾದದ್ದೆಂಬದು ಅನುಭವದಿಂದ ಗೊತ್ತಾಗಿದೆ. ಹವೆಯಲ್ಲಿ ಆರ್ದ್ರತೆಯು ಇಲ್ಲದೆ ಇರುವದರಿಂದ ಒಣಹವೆಯು ಶರೀರಕ್ಕೆ ಬಹಳೇ ಹಿತಕರವಾಗುತ್ತದೆ. ನೆಲವು ಬಹುಶಃ ಇಳಿಜಾರಾಗಿರುವದರಿಂದ ಜವುಳು ಇಲ್ಲವೇ ಇಲ್ಲ. ಜನರು ವಾಡಿಕೆಯಾಗಿ ನಿರೋಗಿಗಳಿರುವರು. ವೇಳೆವೇಳೆಗೆ ಹಸಿವೆಯು ತಪ್ಪುವದಿಲ್ಲ. ಕೃಷ್ಣಾತೀರವು ಎಲ್ಲಕ್ಕೂ ಹೆಚ್ಚು ಆರೋಗ್ಯಕರವಾದ ಪ್ರದೇಶವು. ಇಲ್ಲಿಯ ಜನರು ಪುಷ್ಟರೂ, ಕಸುವುಳ್ಳವರೂ, ಆಯಾಸಕ್ಕೆ ಹೆದರದವರೂ ಆಗಿರುತ್ತಾರೆ. ಆದರೆ ಈ ಸೀಮೆಯಲ್ಲಿ ಸ್ವಚ್ಛನೀರಿನ ಪೂರೈಕೆಯು ಕಡಿಮೆ ಇರುವದರಿಂದ ಮಾರೀಬೇನೆಯ ಉಪದ್ರವವು ಮೇಲಿಂದ ಮೇಲೆ ಆಗುವದು.

---

## ೩ನೆಯ ಪ್ರಕರಣ.

### ನದಿಗಳೂ ನೀರಿನ ಪೂರೈಕೆಯೂ.

ಈ ಜಿಲ್ಹೆಯು, ದಕ್ಷಿಣ ಹಿಂದುಸ್ಥಾನದ ತಪ್ಪಲುಭೂಮಿಯ ಮುಖ್ಯ ಜಲ ಚ್ಛೇದವಾದ ಸಹ್ಯಾದ್ರಿ ಪರ್ವತದಿಂದ ದೂರ ಇರುವದರಿಂದ, ಇದರ ಪಶ್ಚಿಮಕ್ಕೂ ವಾಯವ್ಯಕ್ಕೂ ಇರುವ ಜಿಲ್ಹೆಗಳಿಗಿಂತ ಇದು ತಗ್ಗಿನಲ್ಲಿದೆ. ಆದ್ದರಿಂದ, ಸಾತಾರೆ, ಸೊಲ್ಲಾಪುರ ಜಿಲ್ಹೆ, ದಕ್ಷಿಣ ಮಹಾರಾಷ್ಟ್ರ ಜಹಾಗೀರು, ಕೊಲ್ಹಾಪುರ ಸಂಸ್ಥಾನ, ಬೆಳಗಾಂವ ಜಿಲ್ಹೆ ಮುಂತಾದ ಪ್ರದೇಶಗಳೊಳಗಿನ ನೀರು, ನದಿಗಳ ರೂಪದಿಂದ ಈ ಜಿಲ್ಹೆಯಲ್ಲಿ ಹರಿಯುತ್ತದೆ. ಇವುಗಳಲ್ಲಿ ಕೃಷ್ಣಾ ನದಿಯು ಬಹು ದೂರದಿಂದ ಹರಿದುಬರುತ್ತಿದ್ದು, ತಗ್ಗಿನಲ್ಲಿರುವದರಿಂದ ಇದಕ್ಕೆ ಎಷ್ಟೋ ನದಿಗಳು ಬಂದು ಕೂಡಿರುತ್ತವೆ. ಈ ನದಿಗಳಿಂದ ಒಕ್ಕಲತನಕ್ಕೆ ಕೆಲಮಟ್ಟಿಗೆ ಉಪಯೋಗವಾಗಿದೆ.

ಭೀಮಾ ನದಿಯು.—ಈ ನದಿಯು ಸಹ್ಯಾದ್ರಿ ಪರ್ವತದಲ್ಲಿ ಭೀಮಾಶಂಕರ ಎಂಬ ಸ್ಥಳದಲ್ಲಿ ಹುಟ್ಟಿ, ಪುಣೆ, ಸೊಲ್ಲಾಪುರ ಜಿಲ್ಹೆಗಳೊಳಗಿಂದ ಬಂದು ಸುಮಾರು ೮೦ ಮೈಲುಗಳ ವರೆಗೆ ಹರಿದು ಈ ಜಿಲ್ಹೆಯ ಉತ್ತರ ಮೇರೆಯಾಗಿ, ನಿಜಾಮನ ರಾಜ್ಯವನ್ನು ಸೇರಿ ಕೃಷ್ಣಾ ನದಿಗೆ ಕೂಡುತ್ತದೆ. ಈ ನದಿಯ ನೀರಿಗೆ ಸೆಳವು ವಿಶೇಷವಾಗಿರುವದರಿಂದ ಪಾತ್ರದಲ್ಲಿ ಉಸುಬು ಬಹಳ. ಈ ನದಿಯ ದಂಡೆಯ ಮೇಲೆ ಅಗರಖೇಡವೆಂಬ ಕ್ಷೇತ್ರವುಂಟು. ಧೂಳಖೇಡವೆಂಬಲ್ಲಿ ಈ ನದಿಯು ಉತ್ತರವಾಹಿನಿಯಾಗಿರುವದರಿಂದ ಅದು ಪುಣ್ಯಕರವಾದ ಕ್ಷೇತ್ರದಲ್ಲಿ ಎಣಿಸಲ್ಪಡುತ್ತದೆ. ಅಲ್ಲಿ ದೊಡ್ಡದೊಂದು ಹಳೇ ಶಿವಾಲಯವುಂಟು. ಅಗರಖೇಡವೆಂಬದು ಪೇಶವೆಯವರಿಂದ ಬ್ರಾಹ್ಮಣರಿಗೆ ಕೊಡಲ್ಪಟ್ಟ ಅಗ್ರಹಾರವು. ಈ ನದಿಯ ದಂಡೆಯಲ್ಲಿ ಬೆಳೆಯುವ ಜೋಳವು ಬಹಳೇ ರುಚಿಕರವಾಗಿರುವದರಿಂದ ಪ್ರಸಿದ್ಧವಾಗಿರುವದು.

ಡೋಣಿ.—ಈ ನದಿಯು ವಿಜಾಪುರ ತಾಲೂಕಿನೊಳಗಿನ ಹೊನವಾಡ ಎಂಬ ಗ್ರಾಮದ ಹತ್ತರ ಹುಟ್ಟಿ ವಿಜಾಪುರ, ಬಾಗೇವಾಡಿ, ಮುದ್ದೇಬಿಹಾಳ ತಾಲೂಕುಗಳೊಳಗಿಂದ ಹರಿದು ನಿಜಾಮನ ರಾಜ್ಯವನ್ನು ಸೇರಿ ಕೃಷ್ಣಾ ನದಿಗೆ ಕೂಡುವದು. ಈ ಜಿಲ್ಹೆಯಲ್ಲಿ ಈ ನದಿಯ ಉದ್ದಳತೆಯು ೮೦ ಮೈಲು ಇರು

ವದು. ಈ ನದಿಯು ಹರಿಯುವ ಭೂಮಿಯಲ್ಲಿ ಒಂದು ಪ್ರಕಾರದ ಸೌಳು ಇರುವದರಿಂದ ಇದರ ನೀರು ಉಪ್ಪು ಇರುತ್ತದೆ. ಆದರಿಂದಲೇ ಇಲ್ಲಿ ಬೆಳೆಯು ಚನ್ನಾಗಿ ಬರುವದು. ಮಳೆಗಾಲದಲ್ಲಿ ಮಾತ್ರ ಈ ನದಿಯ ನೀರು ಕುಡಿಯ ಲಿಕ್ಕೆ ಉಪಯೋಗವಾಗುವದು. ಹೊನಗನ ಹಳ್ಳಿಯ ಹತ್ತರ ಇದಕ್ಕೆ ಉಗಿ ಬಂಡಿಯ ಪೂಲು ಇರುವದು. ಪಾತ್ರವು ಚಿಕ್ಕದಿದ್ದು ಪ್ರವಾಹವು ಒಳ್ಳೇ ವೇಗದಿಂದ ಹರಿಯುತ್ತಿರುತ್ತದೆ.

ಕೃಷ್ಣಾ.—ಈ ನದಿಯು ಸಾತಾರೆಯ ಜಿಲ್ಹೆಯಲ್ಲಿ ಹುಟ್ಟಿ, ದಕ್ಷಿಣ ಮಹಾರಾಷ್ಟ್ರ ಜಹಾಗೀರು ಹಾಗು ಬೆಳಗಾಂವ ಜಿಲ್ಹೆ ಇವುಗಳೊಳಗಿಂದ ಹಾಯ್ದು, ಈ ಜಿಲ್ಹೆಯೊಳಗಿನ ಬಾಗಲಕೋಟೆ, ಹುನಗುಂದ ತಾಲೂಕುಗಳ ಉತ್ತರ ಮೇರೆಯಾಗಿ ಹರಿದು, ನಿಜಾಮನ ರಾಜ್ಯವನ್ನು ಸೇರುತ್ತದೆ. ಈ ನದಿಯು ಬಾಡಿಗಿ ಮತ್ತು ಸೊನ್ನ ಈ ಗ್ರಾಮಗಳ ಹತ್ತರ ಉತ್ತರವಾಹಿನಿ ಯಾಗಿರುವದರಿಂದ ಅವು ಕ್ಷೇತ್ರಗಳಲ್ಲಿ ಎಣಿಸಲ್ಪಡುತ್ತವೆ. ಮುಂದೆ ರೊಳ್ಳಿಯ ಹತ್ತರ ಎರಡು ಭಾಗವಾಗಿ ಹರಿದು, ಪುನಃ ಅವೆರಡೂ ಭಾಗಗಳು ಗುಳಬಾಳದ ಹತ್ತರ ಒಂದಕ್ಕೊಂದು ಕೂಡಿ ಒಂದೇ ಪ್ರವಾಹವಾಗುತ್ತದೆ. ಈ ಎರಡು ಭಾಗಗಳ ನಡುವಿನ ಗಡ್ಡೆಯು ಕಲ್ಲಿನದಿದ್ದು ಸರಾಸರಿ ೧⅓ ಮೈಲು ಅಗಲ ೮ ಮೈಲು ಉದ್ದವಾಗಿರುತ್ತದೆ. ಇದರ ದಕ್ಷಿಣದ ಪ್ರವಾಹಕ್ಕೆ ಬೀರಕಬ್ಬಿ (ವೀರಕಪಿ)ಯಿಂದ ಮುಂದೆ ಸ್ವಲ್ಪ ಅಂತರದ ಮೇಲೆ ಸಂಗಮದ ಹತ್ತರ ಘಟ ಪ್ರಭಾ ನದಿಯು ಬಂದು ಕೂಡುತ್ತದೆ. ಸೀತೆಯಮನೆಯ ಹತ್ತರ ಈ ನದಿಗೆ ಉಗಿಬಂಡಿಯ ಪೂಲು ಕಟ್ಟಿರುತ್ತಾರೆ*. ಅದು ಸುಮಾರು ಒಂದು ಮೈಲು ಉದ್ದವಾಗಿರುತ್ತದೆ. ಹುನಗುಂದ ತಾಲೂಕಿನಲ್ಲಿ ಸಂಗಮದ ಹತ್ತರ ಈ ನದಿಗೆ ದಕ್ಷಿಣದಿಂದ ಮಲಾಪಹಾರಿ ನದಿಯು ಬಂದು ಕೂಡುತ್ತದೆ. ಆ ಊರ ಹತ್ತರ ಸಂಗಮೇಶ್ವರ ದೇವಸ್ಥಾನವು ಪ್ರಸಿದ್ಧವಿರುತ್ತದೆ. ಈ ನದಿಯು ಈ ಜಿಲ್ಹೆಯಲ್ಲಿ ೮೦ ಮೈಲು ಉದ್ದವಾಗಿ ಹರಿದುಹೋಗಿರುವದು. ಈ ನದಿಯ ನೀರು ಬಹಳೇ ಆರೋಗ್ಯಕರವು. ಈ ನದಿಯು ಪುಣ್ಯನದಿಗಳಲ್ಲಿ ಎಣಿಸಲ್ಪಡುವ ಕಾರಣ ದೂರ ದೂರದ ಭಾವಿಕಜನರು ಸ್ನಾನಮಾಡಲಿಕ್ಕೆಂದು ಇಲ್ಲಿಗೆ ಬರುವರು. ಪ್ರವಾ ಹವು ಒಳ್ಳೇ ಶಾಂತ ಇರುವದು. ಮಹಾಪೂರ ಬಂದಾಗ್ಗೆ ಪಾತ್ರವು ೩ ಮೈಲು ಅಗಲವಾಗಿರುವದು. ಇದರಿಂದ ಎಷ್ಟೋ ಭೂಮಿಗೆ ನೀರು ದೊರೆಯುತ್ತದೆ.

---

*ಕೊಲ್ಹಾರದ ಹತ್ತರ ಕಾಲುವಾರಿಗೆ ಪೂಲು ಕಟ್ಟುವ ಕೆಲಸವು ಈಗ (೧೯೨೧ನೆ ಇ.) ನಡೆದದೆ.

ಘಟಪ್ರಭಾ.— ಈ ನದಿಯು ಕೊಲ್ಹಾಪುರ ಸಂಸ್ಥಾನದಲ್ಲಿ ರಾಮಘಾಟದ ಹತ್ತರ ಹುಟ್ಟಿ ಬೆಳಗಾಂವ ಜಿಲ್ಹೆ, ಮುಧೋಳ ಸಂಸ್ಥಾನಗಳೊಳಗಿಂದ ಹಾಯ್ದು ಕಲಾದಗಿಯ ಹತ್ತರ ಈ ಜಿಲ್ಹೆಯನ್ನು ಸೇರುತ್ತದೆ. ಮುಂದೆ ಬಾಗಲಕೋಟಿ ತಾಲೂಕಿನಲ್ಲಿ ಹರಿದು, ಕುಂದರಗಿಯ ಗುಡ್ಡದ ಸಾಲನ್ನು ಹೆರಕಲ್ಲಿನ ಹತ್ತರ ಒಡೆದು, ವೀರಕಪಿಯ ಆಚೆಗೆ ಕೃಷ್ಣಾ ನದಿಗೆ ಕೂಡುತ್ತದೆ. ಈ ನದಿಯು ಈ ಜಿಲ್ಹೆಯಲ್ಲಿ ೪೦ ಮೈಲು ಉದ್ದವಾಗಿ ಹರಿದಿರುವದು. ಈ ನದಿಯ ದಂಡೆಯ ಮೇಲೆ ಇರುವ ಕಲಾದಗಿ ಎಂಬದು ಮೊದಲು ಈ ಜಿಲ್ಹೆಯ ಮುಖ್ಯ ಸ್ಥಳವಾಗಿತ್ತು. ಬಾಗಲಕೋಟಿ ತಾಲೂಕಿನ ಮುಖ್ಯ ಸ್ಥಳವಾದ ಬಾಗಲಕೋಟೆಯು ಈ ನದಿಯ ದಂಡೆಯ ಮೇಲೆಯೇ ಇರುವದು. ಬೇಸಿಗೆಯಲ್ಲಿ ಇದರ ನೀರು ಕಡಿಮೆಯಾಗುವದು. ಅನಗವಾಡಿಯ ಹತ್ತರ ಈ ನದಿಗೆ ಕಾಲುದಾರಿಯ ಪೂಲು ಕಟ್ಟಿರುವರು.

ಮಲಾಪಹಾರಿ.— ಈ ನದಿಯು ಬೆಳಗಾಂವ ಜಿಲ್ಹೆಯಲ್ಲಿ ಮುರಕುಂಬಿಯ ಹತ್ತರ ಹುಟ್ಟಿ ರಾಮದುರ್ಗ ಸಂಸ್ಥಾನದೊಳಗಿಂದ ಹಾಯ್ದು ಬಾದಾಮಿ ತಾಲೂಕಿನ ದಕ್ಷಿಣಮೇರೆಯಾಗಿ ಹರಿದು ಚೊಳಚಗುಡ್ಡದ ಹತ್ತರ ಈಶಾನ್ಯ ದಿಕ್ಕಿನಿಂದ ಹುನಗುಂದ ತಾಲೂಕನ್ನು ಸೇರಿ ಸಂಗಮದ ಹತ್ತರ ಕೃಷ್ಣಾ ನದಿಗೆ ಕೂಡುತ್ತದೆ. ಈ ನದಿಯ ದಂಡೆಯ ಮೇಲೆ ಐಹೊಳೆ ಎಂಬ ಇತಿಹಾಸಪ್ರಸಿದ್ಧವಾದ ಗ್ರಾಮವಿದೆ. ಅಲ್ಲಿ ಜೈನರ ಕಾಲದ ಹಳೇ ಗುಡಿಗಳು ಬಹಳ ಇರುವವು. ಈ ನದಿಯು ಈ ಜಿಲ್ಹೆಯಲ್ಲಿ ೬೦ ಮೈಲು ಉದ್ದವಾಗಿ ಹರಿದಿರುವದು. ಇದರ ಪಾತ್ರವು ಸಣ್ಣದಿದ್ದದರಿಂದ ನೀರಿಗೆ ಒಳ್ಳೇ ಸೆಳವು ಇರುವದು. ಮಹಾಪೂರ ಬಂದಾಗ ಪ್ರವಾಹವು ತನ್ನ ಮೊದಲಿನ ಸ್ಥಳವನ್ನು ಬಿಟ್ಟು ಬೇರೆ ಕಡೆಗೆ ಹಾಯುವ ಸಂಭವವು ಸಹ ಉಂಟು. ಆಲೂರಿನ ಹತ್ತರ ಈ ನದಿಗೆ ಉಗಿಬಂಡಿಯ ಪೂಲೂ, ಕಮತಿಗಿಯ ಹತ್ತರ ಕಾಲುದಾರಿಯ ಪೂಲೂ ಇರುವವು.

ನೀರಿನ ಪೂರೈಕೆ.— ಈ ಜಿಲ್ಹೆಯ ಉತ್ತರಭಾಗದೊಳಗೆ ಹಳ್ಳಗಳು ಬಹಳವಿದ್ದು, ಬೇಸಿಗೆಯಲ್ಲಿ ಅವು ಒಣಗಿದಾಗ ಪಾತ್ರದಲ್ಲಿ ಒರತೆಯನ್ನು ತೋಡಿದರೆ ನೀರು ಬರುತ್ತದೆ. ಮತ್ತು ಈ ಹಳ್ಳಗಳ ದಂಡೆಗುಂಟ ಬಾವಿಗಳನ್ನು ತೋಡಿಸಿದರೆ ಸ್ವಲ್ಪ ಅಂತರದಲ್ಲಿಯೇ ಶಾಶ್ವತವಾದ ನೀರಿನ ಶಲೆಗಳು ಹತ್ತುವವು.

ಡೋಣಿಸಾಲಿನಲ್ಲಿ ಸೀನೀರಿನ ಪೂರೈಕೆಯು ಬಹಳ ಕಡಿಮೆ. ಬಾವಿಯಲ್ಲಿಯೂ ಹಳ್ಳಗಳಲ್ಲಿಯೂ ಇರುವ ನೀರು ಬಹುಶಃ ಉಪ್ಪೇ ಇರುತ್ತದೆ. ಡೋಣಿಯ ಹೊರತು ಉಳಿದ ನದಿಗಳಲ್ಲೆಲ್ಲ ಸೀನೀರಿನ ಸಮೃದ್ಧಿಯು ಇರು

ತ್ತದೆ. ಈ ಜಿಲ್ಹೆಯಲ್ಲಿ ಕೆರೆಗಳು ಕಡಿಮೆ. ಮಮದಾಪುರದಲ್ಲಿ ಕಲ್ಲಿನಿಂದ ಕಟ್ಟಿದ ಪುರಾತನಕಾಲದ ಒಂದು ಕೆರೆಯು ಇರುತ್ತದೆ. ಇದರಿಂದ ಎಷ್ಟೋ ಭೂಮಿಯು ನೀರು ಉಣ್ಣುತ್ತದೆ. ಭತ್ತವು ಬೆಳೆಯುತ್ತದೆ. ಬಾದಾಮಿ ತಾಲೂಕಿನಲ್ಲಿ ಚೊಳಚಗುಡ್ಡದ ಹತ್ತರ ಶಾಶ್ವತವಾದ ನೀರಿನ ಒಂದು ಕೆರೆಯು ಇರುತ್ತದೆ. ಇದರಿಂದ ತೆಗೆದ ಕಾಲುವೆಗಳಲ್ಲಿ ನೀರು ನಿರಂತರವಾಗಿ ಹರಿಯುತ್ತಿರುತ್ತದೆ. ಮುಚಕಂಡಿಯ ಹತ್ತರ ಎರಡು ಗುಡ್ಡಗಳ ನಡುವೆ ಎತ್ತರವಾದ ಕಲ್ಲಿನ ಗೋಡೆಯನ್ನು ಕಟ್ಟಿ ಒಂದು ದೊಡ್ಡ ಕೆರೆಯನ್ನು ಕಟ್ಟಿರುತ್ತಾರೆ. ಆ ಕೆರೆಯಲ್ಲಿ ಮಣ್ಣು ಬಹಳ ಕೂಡಿ ಬಿದ್ದದರಿಂದ, ಅದರಿಂದ ತೆಗೆದ ಕಾಲುವೆಯ ಉಪಯೋಗವು ಸದ್ಯಕ್ಕೆ ಆಗುವದಿಲ್ಲ. ಬಾದಾಮಿ, ಬಾಗಲಕೋಟೆ ತಾಲೂಕುಗಳಲ್ಲಿ ಕೆಲಕೆಲವು ಕಡೆಯಲ್ಲಿ ನೀರಿನ ತಾಪತ್ರಯವಿದೆ. ಬೇಸಿಗೆಯಲ್ಲಿ ಕಜ್ಜೀಡೋಣಿ, ತೋಳಮಟ್ಟಿ, ತುಂಬರಮಟ್ಟಿ, ಕೆರಕಲಮಟ್ಟಿ ಮುಂತಾದ ಗ್ರಾಮಗಳ ಜನರು ಬೆಳಿಗ್ಗೆ ಕೊಡ ಹಗ್ಗಗಳನ್ನು ಹೊತ್ತುಕೊಂಡು ಇಲ್ಲವೆ ಬಂಡಿಯನ್ನು ಹೂಡಿಕೊಂಡು, ಹರದಾರಿಗಿಂತ ಹೆಚ್ಚು ದೂರ ಹೋಗಿ ನೀರು ಸಂಪಾದಿಸಿಕೊಂಡು ತಿರುಗಿ ಮಧ್ಯಾಹ್ನಕ್ಕೆ ಮನೆಗೆ ಬರುವರು.

ಬಾದಾಮಿ ತಾಲೂಕಿನೊಳಗಿರುವ ನೀಲಗುಂದದ ಹತ್ತರ ಜವುಳು ಪ್ರದೇಶದಲ್ಲಿ ಬಾವಿಗಳಿಗೆ ನೀರು ಮೇಲೆಯೇ ಬೀಳುತ್ತದೆ. ಅದರ ಹತ್ತರ ಒಂದು ಹಳೇ ಕೆರೆಯುಂಟು. ಅದರಲ್ಲಿ ನೀರು ಕಡಿಮೆ.

ನದಿಗಳಿಂದ ಮುಖ್ಯವಾಗಿ ಆಗುವ ಉಪಯೋಗಗಳಲ್ಲಿ ವ್ಯಾಪಾರದ ದೃಷ್ಟಿಯಿಂದ ಆಗುವ ಉಪಯೋಗವು ಮಹತ್ವದ್ದು. ನದಿಗಳಲ್ಲಿ ಡೋಣಿಗಳು ಓಡಾಡುವಂತೆ ಇದ್ದರೆ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಸರಕುಗಳನ್ನು ಬಹು ಸುಲಭವಾಗಿ ಒಯ್ಯಬಹುದು. ಎಲ್ಲ ತರದ ಮಾರ್ಗಗಳಲ್ಲಿ ಜಲಮಾರ್ಗವು ಬಹಳ ಅಗ್ಗವಾದದ್ದು; ಅದರ ತರುವಾಯ ಉಗಿಬಂಡಿಯ ಮಾರ್ಗ; ಅದರ ತರುವಾಯ ಲೈನಮಾರ್ಗ. ನೌಕಾಗಮನಕ್ಕೆ ಅನುಕೂಲವಾದ ನದಿಗಳು ವಿಜಾಪುರ ಜಿಲ್ಹೆಯಲ್ಲಿ ಒಂದೂ ಇಲ್ಲ. ಇನ್ನು ಕಾಲುವೆಗಳಿಂದ ಭೂಮಿಗೆ ನೀರನ್ನು ಹಾಯಿಸಿಕೊಂಡು ಹೆಚ್ಚಾಗಿ ಪೈರನ್ನು ಬೆಳಿಸಿಕೊಳ್ಳಬೇಕೆಂದರೆ, ಅದಕ್ಕೂ ಈ ಜಿಲ್ಹೆಯ ನದಿಗಳು ಅನುಕೂಲವಿಲ್ಲ. ಯಾಕಂದರೆ ಕಾಲುವೆಗಳಾಗಲಿಕ್ಕೆ ಖರ್ಚು ಬಹಳ ಬೇಕಾಗುವದು. ಅಲ್ಲದೆ ಅವುಗಳಿಗೆ ನೀರಿನ ಪೂರೈಕೆಯಾಗುವಷ್ಟು ಪ್ರವಾಹದ ನದಿಗಳು ಇಲ್ಲ. ಬೇಸಿಗೆಯಲ್ಲಿ ಹರಿಗಡಿಯುವಂಥ ನದಿಗಳೇ ಬಹಳ.

## ೪ನೆಯ ಪ್ರಕರಣ.

### ಭೂಮಿಯ ಗುಣವೂ ಹುಟ್ಟುವಳಿಯೂ.

೧. **ಭೂಮಿಯ ಗುಣ.**—ಹಿಂದೆ, ಈ ಜಿಲ್ಹೆಯ ಸ್ವಾಭಾವಿಕ ಲಕ್ಷಣಗಳನ್ನು ಹೇಳುವಾಗ ಈ ಜಿಲ್ಹೆಯಲ್ಲಿ ಮೂರು ಸ್ವಾಭಾವಿಕ ಭಾಗಗಳನ್ನು ಮಾಡಿ ಒಂದೊಂದು ಭಾಗದ ಭೂಮಿಯ ಗುಣವನ್ನು ಸಾಧಾರಣವಾಗಿ ಹೇಳಿರುವೆವು. ಇಲ್ಲಿ ಆಯಾ ಭೂಮಿಗಳ ವಿಷಯವಾಗಿ ಕೆಲವು ಹೆಚ್ಚಿನ ಸಂಗತಿಗಳನ್ನು ವಿವರಿಸುವೆವು.

ಇಡೀ ಈ ಜಿಲ್ಹೆಯು ಬೈಲುಸೀಮೆಯಲ್ಲಿ ಎಣಿಸಲ್ಪಡುತ್ತದೆ. ಇದರಲ್ಲಿ ಗುಡ್ಡಗಳು ಕಡಿಮೆ. ಎರೆನೆಲವೇ ಹೆಚ್ಚು. ಬಾದಾಮಿ, ಬಾಗಲಕೋಟೆ, ಹುನಗುಂದ ತಾಲೂಕುಗಳೊಳಗಿನ ಗುಡ್ಡಗಾಡು ಸೀಮೆಯ ನೆರೆಯ ಪ್ರದೇಶವು ಮಾತ್ರ ಮಸಾರೆಯ ನೆಲವಿರುತ್ತದೆ. ಮಸಾರೆಯ ಭೂಮಿಗೆ ಗೊಬ್ಬರವೂ, ಶ್ರಮವೂ, ಮಳೆಯೂ ಹೆಚ್ಚು ಬೇಕು. ಎರೆಭೂಮಿಗೆ ಅಷ್ಟು ಬೇಡ. ಡೋಣಿ ಸಾಲಿನ ಎರೆಭೂಮಿಯೂ, ಕೃಷ್ಣಾ, ಭೀಮಾ ನದಿಗಳ ದಂಡೆಯ ಎರೆಭೂಮಿಯೂ ಕಾಳಿನ ಪೈರಿಗೆ ಹೆಸರಾದವು. ಎರೆಭೂಮಿಗೆ ಒಮ್ಮೆ ಒಳಿತಾಗಿ ಮಳೆಯಾಯಿತೆಂದರೆ, ನೆಲದೊಳಗಿನ ತೇವು ಎರಡು ಮೂರು ತಿಂಗಳುಗಳ ವರೆಗೆ ಆರುವದಿಲ್ಲ. ಆದರಿಂದ ಒಂದೇ ದೊಡ್ಡ ಮಳೆಯಾದರೆ, ಆ ಭೂಮಿಯಲ್ಲಿ ಪೈರು ಬರುತ್ತದೆ. ಇದಲ್ಲದೆ ಹಸಿನೆಲವು ಆರಿದ ಹಾಗೆ ಬೇಸಿಗೆಯಲ್ಲಿ ಬಿರಿಯುತ್ತ ಹೋಗುತ್ತದೆ. (ಶಿಕ್ಷಕರು ವಿದ್ಯಾರ್ಥಿಗಳಿಗೆ ಎರಕಲ ಬೀಡುಗಳನ್ನು ತೋರಿಸಬೇಕು.) ನಾಲ್ಕಾರು ಫೂಟಿನ ವರೆಗೆ ಆಳವಾದ ಬಿರುಕುಗಳಲ್ಲಿ ಹವೆಯು ಸೇರಿ ಮಣ್ಣಿನ ಗುಣವನ್ನು ಸುಧಾರಿಸುತ್ತದೆ. ಒಂದು ಮಳೆಯಾದ ಕೂಡಲೇ ಸೂಸುಮಣ್ಣು ಹರಿದುಹೋಗಿ ಬಿರುಕುಗಳಲ್ಲಿ ಸೇರುವದರಿಂದ ಹೊಸ ಮಣ್ಣು ತನ್ನಿಂದ ತಾನೇ ಮೇಲೆ ಬರುತ್ತದೆ. ಆದಕಾರಣ ಎರೆಭೂಮಿಗೆ ಬಹಳ ಗೊಬ್ಬರ ಹಾಕುವದೂ, ಶ್ರಮ ಮಾಡುವದೂ ಕಾರಣವಿಲ್ಲ. ಮೊದಲು ಒಮ್ಮೆ ರೆಂಟೆ ಹೊಡೆದು ಹರಗಿದರೆ ತೀರಿತು. ಉತ್ತಮ ಬೆಳೆ ಬರುತ್ತದೆ. ಈ ಭೂಮಿಯಲ್ಲಿ ನಟ್ಟು ಬೆಳೆಯುವದು ಬಹಳ. ಇದನ್ನು ತೆಗೆಯುವದಕ್ಕೋಸ್ಕರ ಕಬ್ಬಿಣರೆಂಟೆಯನ್ನು ಉಪಯೋಗಿಸಬೇಕಾಗುತ್ತದೆ. ಇಲ್ಲವೆ ನಟ್ಟು ಕಡಿಸಬೇಕಾಗುತ್ತದೆ.

ಈ ಕಪ್ಪುಬಣ್ಣದ ಭೂಮಿಯಲ್ಲಿ ಹತ್ತಿ, ಬಿಳಿಜೋಳ, ಗೋಧಿ, ಕಡ್ಲಿ, ಎಣ್ಣೀಕಾಳುಗಳು ಬೆಳೆಯುವವು.

೨. **ಹುಟ್ಟುವಳಿ.**—ಯಾವದೊಂದು ಪ್ರದೇಶದ ಮಳೆಯ ಮಾನವನ್ನೂ, ಅಲ್ಲಿಯ ಭೂಮಿಯ ಗುಣವನ್ನೂ, ಅಲ್ಲಿಯ ಹವೆಯನ್ನೂ ಅಭ್ಯಾಸಿಸಿದರೆ, ಅಲ್ಲಿಯ ಹುಟ್ಟುವಳಿಯು ಸಹಜವಾಗಿ ಗೊತ್ತಾಗುವದು. ಯಾಕಂದರೆ ಬೇರೆಬೇರೆ ಪೈರುಗಳಿಗೆ ಬೇರೆಬೇರೆ ಮಾನದ ಮಳೆಯೂ, ಭೂಮಿಯೂ, ಹವೆಯೂ ಬೇಕಾಗುತ್ತವೆ.

ಈ ಜಿಲ್ಹೆಯಲ್ಲಿ ಎರೆಯ ನೆಲ, ಉಸುಕು ಕೂಡಿದ ಎರೆಯ ನೆಲ, ಮಸಾರಿಯ ನೆಲ ಈ ಪ್ರಕಾರ ಮೂರು ತರದ ಭೂಮಿಗಳು ಇರುವವೆಂದು ಹಿಂದೆ ಹೇಳಿದ್ದೇವೆ. ಇಲ್ಲಿ ಒಂದೊಂದು ಪ್ರಕಾರದ ಭೂಮಿಯಲ್ಲಿ ಬೆಳೆಯುವ ಬೆಳೆಗಳಲ್ಲಿ ಒಂದೊಂದನ್ನು ಪ್ರತ್ಯೇಕವಾಗಿ ವಿವರಿಸಿ ಅವು ಆಯಾ ಭೂಮಿಯಲ್ಲಿಯೇ ಬೆಳೆಯುವ ಕಾರಣಗಳನ್ನು ವಿಚಾರಿಸುವಾ.

ಜೋಳ.—ವಿಜಾಪುರ ಜಿಲ್ಹೆಯ ಎಲ್ಲ ತಾಲೂಕುಗಳಲ್ಲಿಯೂ ಜೋಳದ ಪೈರು ಒಳಿತಾಗಿ ಬರುತ್ತದೆ. ಅದರಲ್ಲಿಯೂ ಡೋಣಿಸಾಲಿನ ಜೋಳವೂ ಕೃಷ್ಣಾ, ಭೀಮಾ ನದಿಗಳ ತೀರದ ಜೋಳವೂ ಹೆಸರಾದವುಗಳು. 'ಡೋಣಿ ಬೆಳೆದರೆ ಓಣೆಲ್ಲ ಜೋಳ' ಎಂಬ ಗಾದೆಯ ಮಾತು ಪ್ರಸಿದ್ಧವಾದದ್ದು. ಮಸಾರಿಯ ಭೂಮಿಯಲ್ಲಿ ಕೆಂಜೋಳದ ಬೆಳೆಯು ಬರುತ್ತದೆ. ಬಿಳಿಜೋಳವನ್ನು ಎರೆಭೂಮಿಯಲ್ಲಿಯೇ ಬಿತ್ತುವರು. ಜೋಳವೇ ಈ ಜಿಲ್ಹೆಯ ಜನರ ಮುಖ್ಯಾಹಾರವು. ಕೆಂಜೋಳದ ಸಂಗಡ ತೊಗರಿ, ಅಲಸಂದಿ, ಹೆಸರು, ಹುರಳಿಗಳ ಅಕ್ಕಡಿಗಳನ್ನು ಹಾಕುವರು. ಬಿಳಿಜೋಳದ ಸಂಗಡ ಕಡ್ಲಿ, ಕುಸಿಬೆ, ಅಗಸಿಗಳನ್ನು ಕೆಲವೆಡೆಯಲ್ಲಿ ಬಿತ್ತುವರು. ವಿಜಾಪುರ ಜಿಲ್ಹೆಯಲ್ಲಿ ಭೀಮಾ ತೀರದ ಜೋಳವು ರುಚಿಯಲ್ಲಿ ಎಲ್ಲಕ್ಕೂ ಮೇಲಾದದ್ದು.

ಗೋಧಿ.—ಗೋಧಿಯು ಜಿಗಟುಮಣ್ಣಿನ ಭೂಮಿಯಲ್ಲಿ ಒಳಿತಾಗಿ ಬರುತ್ತದೆ. ಆದ್ದರಿಂದ ಕಪ್ಪುಭೂಮಿಯೇ ಇದರ ಬೆಳೆಗೆ ಉತ್ತಮವಾದದ್ದು. ಕೆಂಪು ಭೂಮಿಯಲ್ಲಿ ಬಹುಶಃ ಇದನ್ನು ಬಿತ್ತುವದಿಲ್ಲ. ಇದಕ್ಕೆ ನೀರು ಬಹಳ ಬೇಡ. ಬಿತ್ತಿದನಂತರ ಮೊಳಿಕೆ ಹಾಯ್ದು ಮೇಲೆ ಇದು ಆರ್ದ್ರತ್ವವಿಲ್ಲದ ಬೆಚ್ಚಗಿನ ಹವೆಯಲ್ಲಿ ಚನ್ನಾಗಿ ಬೆಳೆಯುವದು. ಇವೆಲ್ಲ ಕಾರಣಗಳಿಂದ ಈ ಪೈರನ್ನು ಬಾಗೇ

ವಾಡಿ, ವಿಜಾಪುರ ತಾಲೂಕುಗಳಲ್ಲಿಯೂ, ಸಾಧಾರಣವಾಗಿ ಉಳಿದ ತಾಲೂಕುಗಳಲ್ಲಿಯೂ ಬೆಳೆಯುವರು.

ಬತ್ತ.—ಬತ್ತದ ಪೈರಿಗೆ ನೀರು ಬಹಳ ಬೇಕು. ಉಷ್ಣಹವೆಯೂ ಬೇಕು. ಇದು ಬೆಳೆಯಲಾರಂಭಿಸಿದ ಮೇಲೆ ಕೆಲವು ಸಾರೆ ಹೊಲಗಳಿಗೆ ನೀರು ಉಣಿಸಬೇಕಾಗುತ್ತದೆ. ಕೆಂಪುಭೂಮಿಯಲ್ಲಿ ಇದು ಬಹಳ ಕಸುವಿನಿಂದ ಬರುವದು. ಈ ಜಿಲ್ಹೆಯಲ್ಲಿ ಮಳೆಯು ಕಡಿಮೆಯಾಗುವದರಿಂದಲೂ ನೀರಿನ ಪೂರೈಕೆಯಾದರೂ ವಿಶೇಷವಿಲ್ಲದ್ದರಿಂದಲೂ ಬತ್ತದ ಬೆಳೆಯು ಅಲ್ಪಸ್ವಲ್ಪ ಮಾತ್ರ ಬರುತ್ತದೆ. ಬಾದಾಮಿ, ಇಂಡಿ ತಾಲೂಕುಗಳಲ್ಲಿ ಅಲ್ಪಪ್ರಮಾಣದಿಂದ ಈ ಪೈರನ್ನು ಬೆಳಿಸುವರು. ವಿಜಾಪುರ ತಾಲೂಕದೊಳಗಿನ ಮಮದಾಪುರ ಕೆರೆಯಿಂದ ಕೆಲಮಟ್ಟಿಗೆ ಬತ್ತದ ಪೈರಿಗೆ ಅನುಕೂಲವಾಗಿದೆ. ಮೇ (ವೈಶಾಖ ಜ್ಯೇಷ್ಠ) ತಿಂಗಳಲ್ಲಿ ಚನ್ನಾಗಿ ಮಳೆಯಾದರೆ, ಬತ್ತವನ್ನು ಬಿತ್ತುತ್ತಾರೆ. ಅದು ಮೊಳೆಯುವಷ್ಟರಲ್ಲಿ ಮಳೆಗಾಲವು ಆರಂಭವಾದರೆ, ನೀರಿನ ಪೂರೈಕೆಯಾಗುತ್ತದೆ. ಇಲ್ಲದ ಪಕ್ಷದಲ್ಲಿ ಕೆರೆಗಳಿಂದ ಬತ್ತದ ಹೊಲಗಳಿಗೆ ನೀರು ಹಾಯಿಸಬೇಕಾಗುತ್ತದೆ. ಈ ಜಿಲ್ಹೆಯಲ್ಲಿ ಮಳೆಯ ಮಾನವು ಕಡಿಮೆ ಇರುವದರಿಂದ ಬತ್ತದ ಬೆಳೆಯು ತೀರ ಸ್ವಲ್ಪ ಮಾತ್ರ ಬರುತ್ತದೆ.

ಹತ್ತಿ.—ಹತ್ತಿಯ ಪೈರು ಎರೆಮಣ್ಣಿನಲ್ಲಿ ಚನ್ನಾಗಿ ಬರುವದು. ಇದಕ್ಕೆ ನೀರು ಬಹಳ ಬೇಕಾಗುವದಿಲ್ಲ. ಇದಕ್ಕೆ ಚಳಿಗಾಲದ ಪೈರೆಂದೆನ್ನಬಹುದು. ಇದಕ್ಕೆ ತೇವನ್ನು ಹಿಡಿಯುವ ಭೂಮಿಯೂ, ಬೆಚ್ಚಗಿನ ಹವೆಯೂ ಬೇಕು. ಹವೆಯಲ್ಲಿ ಬಹಳ ಆರ್ದ್ರತೆ ಇದ್ದರೆ, ಈ ಪೈರು ಚನ್ನಾಗಿ ಬರುವದಿಲ್ಲ. ಮಂಜು, ಇಬ್ಬನ್ನಿಗಳು ಈ ಪೈರನ್ನು ಕೆಡಿಸುತ್ತವೆ. ಈ ಜಿಲ್ಹೆಯ ಎಲ್ಲ ತಾಲೂಕುಗಳಲ್ಲಿ ಹೆಚ್ಚುಕಡಿಮೆ ಪ್ರಮಾಣದಿಂದ ಹತ್ತಿಯ ಪೈರನ್ನು ಬೆಳೆಯುವರು. ಆದರೂ ಬಾದಾಮಿ ತಾಲೂಕಿನಲ್ಲಿ ಕೆಂಪುಭೂಮಿಯು ವಿಶೇಷವಾಗಿ ಇದ್ದದರಿಂದ ಅಲ್ಲಿ ಈ ಪೈರು ಕಡಿಮೆ ಬೆಳೆಯುವದು. ಇತ್ತಿತ್ತಲಾಗಿ ಹತ್ತಿಗೆ ವಿಶೇಷ ಬೆಲೆ ಬರಹತ್ತಿದ್ದರಿಂದ ಒಕ್ಕಲಿಗರ ಲಕ್ಷ್ಯವು ಈ ಪೈರಿನ ಕಡೆಗೆ ತಿರುಗಿದೆ. ಈ ಜಿಲ್ಹೆಯಲ್ಲಿ ಜವಾರಿ ಹತ್ತಿ, ವಿಲಾಯತಿ ಹತ್ತಿ, ಕ್ಯಾಂಬೋಡಿಯಾ ಹತ್ತಿ ಹೀಗೆ ಮೂರು ಪ್ರಕಾರದ ಹತ್ತಿಯನ್ನು ಬೆಳೆಯುವರು.

ಕಬ್ಬು.—ಕಬ್ಬು ತೋಟದಲ್ಲಿ ಮಾತ್ರ ಬೆಳೆಯುತ್ತದೆ. ಬತ್ತದಂತೆ ಇದಕ್ಕಾದರೂ ನೀರು ಬಹಳ ಬೇಕು. ಆದ್ದರಿಂದ ಹೊಳೆಗಳ ದಂಡೆಯಲ್ಲಿಯೂ,

ಜವಳಾಡುವ ಸ್ಥಳದಲ್ಲಿಯೂ, ತೋಟಗಳಲ್ಲಿಯೂ, ಕಬ್ಬಿನ ಪೈರನ್ನು ತೆಗೆದು ಕೊಳ್ಳುವರು.

ವಿಜಾಪುರ ಜಿಲ್ಹೆಯಲ್ಲಿ ಬೇರೆಬೇರೆ ತಾಲೂಕುಗಳಲ್ಲಿಯ ಒಕ್ಕಲತನದ ಬಗ್ಗೆ ಕೆಳಗಿನ ಕೋಷ್ಟಕದಿಂದ ಕೆಲವು ಸಂಗತಿಗಳು ಗೊತ್ತಾಗುವವು. ಈ ಕೋಷ್ಟಕವು ೧೯೧೮ನೇ ಇಸವಿಯ ಬಗ್ಗೆ ಅದೆ.—

| ತಾಲೂಕು. | ಒಟ್ಟು ಕ್ಷೇತ್ರ ಎಕರೆ. | ಮಳೆ ನೀರಿನಿಂದ ಸಾಗಾದ ಭೂಮಿ ಅಂದರೆ ತರಿಭೂಮಿ. | ಹೊಯಿದ ನೀರಿನಿಂದ ಸಾಗಾದ ಭೂಮಿ ಅಂದರೆ ಬಾಗಾಯಿತ ಭೂಮಿ. | ಸಾಗುವಳಿ ಮಾಡಬಹುದಾದ ಭೂಮಿ. | ಅಂತು. |
|---|---|---|---|---|---|
| ಇಂಡಿ | ೫೩೬೨೭೩ | ೫೦೧೪೦೮ | ೬೭೭೩ | ೪೫೭೬ | ೫೧೨೭೫೭ |
| ಸಿಂದಗಿ | ೫೧೮೨೪೬ | ೪೯೨೪೦೩ | ೩೩೬೦ | ೩೫೮೫ | ೪೯೯೩೪೮ |
| ವಿಜಾಪುರ | ೫೮೦೪೨೩ | ೫೪೦೨೮೦ | ೩೮೧೮ | ೧೯೫೫೧ | ೫೬೩೬೪೯ |
| ಬಾಗೇವಾಡಿ | ೪೮೮೯೫೪ | ೪೫೮೩೮೧ | ೩೫೩೮ | ೪೨೦೫ | ೪೬೬೧೨೪ |
| ಮುದ್ದೇಬಿಹಾಳ | ೩೬೪೩೯೪ | ೩೪೧೩೧೧ | ೭೭೩ | ೨೨೬೭ | ೩೪೪೩೫೧ |
| ಬಾಗಲಕೋಟಿ | ೪೩೭೫೬೭ | ೩೫೨೨೪೦ | ೬೦೮ | ೫೫೦೩ | ೩೫೮೩೬೧ |
| ಬಾದಾಮಿ | ೩೯೩೭೫೦ | ೨೮೫೬೫೩ | ೭೫೮ | ೮೫೩೨ | ೨೯೪೯೪೩ |
| ಹುನಗುಂದ | ೩೩೩೩೦೦ | ೨೯೦೨೬೦ | ೩೦೭ | ೧೨೭೨ | ೨೯೧೮೩೯ |
| **ಅಂತು** | ೩೬೫೨೯೦೭ | ೩೨೬೧೯೩೬ | ೧೯೯೩೫ | ೪೯೪೯೧ | ೩೩೩೦೩೬೨ |

ತೋಟದ ಪೈರುಗಳು.—ಕೆರೆ, ಹಳ್ಳ, ಅಥವಾ ಹೊಳೆಗಳಿಂದ ನೀರು ವಿಪುಲವಾಗಿ ದೊರೆಯುವ ಸ್ಥಳಗಳಲ್ಲಿ ತೋಟಗಳಿರುವದು ಸ್ವಾಭಾವಿಕವು. ತೋಟಗಳಲ್ಲಿ ಕಬ್ಬು, ಬಾಳೆ, ಎಲೆಬಳ್ಳಿ, ಗೋವಿನ ಜೋಳ, ಮೆಣಸಿನ ಕಾಯಿ, ಉಳ್ಳೇಗಡ್ಡಿ, ಗೆಣಸು, ಕಾಯಿಪಲ್ಲೆಗಳು ಇವುಗಳನ್ನು ಬೆಳೆಯುತ್ತಾರೆ. ಇವುಗಳ ಆದಾಯವು ಹೊಲಗಳ ಆದಾಯಕ್ಕಿಂತ ಹೆಚ್ಚಿರುತ್ತದೆ. ಖರ್ಚಾದರೂ ಹೊಲಗಳಿಗಿಂತ ಹೆಚ್ಚು ಇರುವದು. ಇಂಥ ತೋಟಗಳು ಬಾಗೇವಾಡಿ ತಾಲೂಕಿನಲ್ಲಿ ಹೆಚ್ಚು ಇರುತ್ತವೆ. ಯಾಕಂದರೆ ಆ ತಾಲೂಕಿನಲ್ಲಿ ಹಳ್ಳಗಳು ವಿಶೇಷವಾಗಿದ್ದು, ನೀರು ವಿಪುಲವಾಗಿರುತ್ತದೆ. ಇಂಡೀ ತಾಲೂಕು, ವಿಜಾಪುರ ತಾಲೂಕುಗಳಲ್ಲಿಯೂ ತೋಟಗಳು ತಕ್ಕಮಟ್ಟಿಗೆ ಅವೆ. ಬಾಗಲಕೋಟಿ ತಾಲೂಕಿನೊಳಗಿನ ಮುರನಾಳ ಗ್ರಾಮದಲ್ಲಿಯೂ, ಬಾದಾಮಿ ತಾಲೂ

ಕಿನ ಚೊಳಚಗುಡ್ಡದಲ್ಲಿಯೂ ತೋಟಗಳು ವಿಶೇಷವಾಗಿ ಅವೆ. ಕೂಡಗಿ, ಚೊಳಚಗುಡ್ಡಗಳಲ್ಲಿ ಉತ್ತಮವಾದ ಎಲೆಬಳ್ಳಿಯ ತೋಟಗಳಿವೆ. ಇಲ್ಲಿಯ ಎಲೆಗಳು ದೂರದೂರ ಮಾರಾಟಕ್ಕೆ ಹೋಗುತ್ತವೆ.

ಅಡವಿಗಳು.—ವಿಜಾಪುರ ಜಿಲ್ಹೆಯ ಬೇರೆ ಬೇರೆ ತಾಲೂಕುಗಳಲ್ಲಿರುವ ಅಡವಿಗಳ ಕ್ಷೇತ್ರವನ್ನು ಕೆಳಗಿನ ಕೋಷ್ಟಕದಲ್ಲಿ ಕೊಟ್ಟಿರುತ್ತದೆ. ಈ ಜಿಲ್ಹೆಯಲ್ಲಿ ಮಳೆಯ ಮಾನವು ಕಡಿಮೆಯಾಗಿರುವದರಿಂದ ಹೇಳತಕ್ಕಂಥ ಅಡವಿಗಳೇ ಇಲ್ಲ. ಬಾದಾಮಿ, ಬಾಗಲಕೋಟೆ, ಹುನಗುಂದ ತಾಲೂಕುಗಳಲ್ಲಿ ಅಲ್ಪಸ್ವಲ್ಪ ಅಡವಿಗಳನ್ನು ಕಾಣಬಹುದು. ಆದರೆ ಆ ಅಡವಿಗಳಲ್ಲಿ ತೇಗು, ಮತ್ತಿ, ಹೊನ್ನಿ ಮೊದಲಾದ ಪ್ರಸಿದ್ಧ ಗಿಡಗಳು ಇಲ್ಲೇ ಇಲ್ಲ. ಇಲ್ಲಿಯ ಅಡವಿಗಳಲ್ಲಿ ಸಾಧಾರಣವಾಗಿ ಜಾಲಿ, ಬೇವು, ತುಗಲಿ, ಕವಳಿ, ಕಾರಿ, ಮಶವಾಳ, ಹುಲಗಲ ಮೊದಲಾದ ಗಿಡಗಳು ಬೆಳೆಯುವವು. ಈ ಅಡವಿಗಳಲ್ಲಿ ಹುಲ್ಲು ಬನ್ನಿಗಳು ಬೇಕಾದಷ್ಟು ಅವೆ. ಈ ಜಿಲ್ಹೆಯಲ್ಲಿ ೧೯೧೭-೧೮ ಈ ಇಸವಿಯಲ್ಲಿ ಸರಕಾರಕ್ಕೆ ಅಡವಿಗಳಿಂದ ೫೦೬೭೫ ರೂಪಾಯಿ ಆದಾಯವಾಯಿತು.

## ವಿಜಾಪುರ ಜಿಲ್ಹೆಯಲ್ಲಿದ್ದ ಅಡವಿಗಳ ಕ್ಷೇತ್ರಫಲ.

| ನಂಬರು. | ತಾಲೂಕುಗಳ ಹೆಸರು. | ಆಯಾ ತಾಲೂಕುಗಳಲ್ಲಿರುವ ಅಡವಿಗಳ ಒಟ್ಟು ಕ್ಷೇತ್ರ. (ಎಕರೆ) |
|---|---|---|
| ೧ | ಬಾಗಲಕೋಟೆ | ೫೦೪೨೩ |
| ೨ | ಬಾದಾಮಿ | ೬೩೯೩೫ |
| ೩ | ಹುನಗುಂದ | ೨೨೭೫೧ |
| ೪ | ಬಾಗೇವಾಡಿ | ೧೧೩ |
| ೫ | ವಿಜಾಪುರ | ೧೬೭೫ |
| ೬ | ಇಂಡಿ | — |
| ೭ | ಸಿಂದಗಿ | — |

೩. ಪಶುಗಳು.—ಪಶುಗಳಲ್ಲಿ ಸಾಕುವ ಪಶುಗಳೆಂತಲೂ ಕಾಡುಪಶುಗಳೆಂತಲೂ ಎರಡು ಭಾಗಗಳನ್ನು ಮಾಡಬಹುದು. ಸಾಕುಪಶುಗಳಿಂದ ಜನ

ರಿಗೆ ಬಹಳ ಉಪಯೋಗವುಂಟು. ಅಡವಿಯ ಪಶುಗಳಿಂದ ಜನರಿಗೂ, ದನಕರುಗಳಿಗೂ, ಪೈರುಗಳಿಗೂ ಹಾನಿಯಾಗುವದುಂಟು.

ಈ ಜಿಲ್ಹೆಯಲ್ಲಿ ದೊರೆಯುವ ಸಾಕುಪಶುಗಳಲ್ಲಿ ಎತ್ತುಗಳು, ಆಕಳುಗಳು, ಎಮ್ಮೆಕೋಣಗಳು, ಕುರಿಗಳು, ಆಡುಗಳು, ಕುದುರೆಗಳು, ಕತ್ತೆಗಳು ಮುಖ್ಯವಾಗಿರುತ್ತವೆ. ಹೊಲಗೆಲಸವೂ, ಬಂಡಿಗಳನ್ನು ಎಳೆಯುವ ಕೆಲಸವೂ, ಮುಖ್ಯವಾಗಿ ಎತ್ತುಗಳಿಂದಲೇ ಸಾಗುವದರಿಂದ ಈ ಪಶುಗಳ ಸಂಖ್ಯೆಯು ಎಲ್ಲಕ್ಕೂ ಹೆಚ್ಚು ಉಂಟು. ಕೃಷ್ಣಾ ನದಿಯ ದಂಡೆಯ ಎತ್ತುಗಳ ಹೊರತು ಉಳಿದ ಕಡೆಯಲ್ಲಿ ಉತ್ತಮ ಎತ್ತುಗಳು ಹುಟ್ಟುವದಿಲ್ಲ. ಕೃಷ್ಣೆಯ ದಂಡೆಯ ಎತ್ತುಗಳಿಗೆ ಹೊಳೆಸಾಲ ಎತ್ತುಗಳೆನ್ನುತ್ತಾರೆ. ಮೂಡಲದ ಎತ್ತುಗಳು ಬಹಳ ಕಸುವುಳ್ಳವು. ಇವುಗಳನ್ನು ಬಳ್ಳಾರಿ, ಮೈಸೂರು ದೇಶಗಳಿಂದ ತರಿಸುತ್ತಾರೆ. ಆದಾಗ್ಯೂ ಇವುಗಳಿಗೆ ಮಿತಿಮೀರಿದ ಶ್ರಮವೂ ಉಪವಾಸವೂ ತಡೆಯುವದಿಲ್ಲ. ಮತ್ತು ಸುಗ್ರಾಸವು ಬೇಕು. ಜವಾರಿಯ ದನಕ್ಕೆ ಅಲ್ಪಸ್ವಲ್ಪ ಸಿಕ್ಕಂಥ ಆಹಾರ ಕೊಟ್ಟು ಬೆಳಗಿನಿಂದ ಸಾಯಂಕಾಲದ ವರೆಗೆ ದುಡಿಸಿಕೊಳ್ಳಬಹುದು. ಆದ್ದರಿಂದ ಒಕ್ಕಲಿಗರು ಜವಾರಿಯ ಎತ್ತುಗಳನ್ನೇ ಹೆಚ್ಚಾಗಿ ಕಟ್ಟುವರು. ಮೂಡಲದ ಎತ್ತುಗಳು ಗಾಡಿಗಳನ್ನು ಎಳೆಯುವಲ್ಲಿ ಜವಾರೀ ಎತ್ತುಗಳಿಗಿಂತ ಮೇಲಾಗಿರುತ್ತವೆ.

ಆಕಳುಗಳನ್ನು ಮುಖ್ಯವಾಗಿ ಹೈನಕ್ಕೋಸ್ಕರ ಕಟ್ಟುವರು. ಮತ್ತು ಒಕ್ಕಲತನಕ್ಕೆ ಬೇಕಾಗುವ ಎತ್ತುಗಳು ಇವುಗಳಿಂದಲೇ ಹುಟ್ಟುವ ಕಾರಣದಿಂದಲೂ ಇವುಗಳನ್ನು ಕಟ್ಟುವರು. ಈ ಜಿಲ್ಹೆಯಲ್ಲಿ ಜವಾರಿ ಆಕಳುಗಳೇ ಅವೆ. ಮೂಡಲಜಾತಿಯ ಆಕಳುಗಳು ಇಲ್ಲ.

ಕೋಣಗಳು ಎತ್ತುಗಳಿಗಿಂತ ಹೆಚ್ಚು ಕಸುವುಳ್ಳವು ಇರುತ್ತವೆ. ಆದರೆ ಅವುಗಳಿಗೆ ಬುದ್ಧಿ ಬಹು ಕಡಿಮೆ. ಬಿಸಿಲು ತಾಳುವದಿಲ್ಲ. ಈ ಪಶುಗಳು ಬಹು ಮಂದ. ರೆಂಟೆ ಹೊಡೆಯೋಣ ಮೊದಲಾದ ಕಸುವಿನ ಕೆಲಸಕ್ಕೆ ಒಕ್ಕಲಿಗರು ಇವುಗಳನ್ನು ಅಪರೂಪವಾಗಿ ಹೂಡುವದುಂಟು. ಒಡ್ಡರು ತಮ್ಮ ಬಂಡಿಗಳನ್ನು ಎಳೆಯಲಿಕ್ಕೆ ಇವುಗಳನ್ನು ಉಪಯೋಗಿಸುವರು. ಕೆಲವು ಕಡೆಯಲ್ಲಿ ಭಾರ ಹೇರಲಿಕ್ಕೂ, ಲಗಳಿಯನ್ನು ಹಾಕಲಿಕ್ಕೂ, ಕೋಣಗಳನ್ನು ಉಪಯೋಗಿಸುವರು. ೩-೪ ತಾಸು ಹೊತ್ತು ಏರಿತೆಂದರೆ ಇವುಗಳ ಆಟವು ನಿಂತುಹೋಗುತ್ತದೆ.

ಎಲ್ಲ ಪ್ರಕಾರದ ಹೈನಗಳಲ್ಲಿ ಎಮ್ಮೆಯ ಹೈನವೇ ಮೇಲಾದದ್ದು. ಎಮ್ಮೆಯ

ಹಾಲು ಆಕಳ ಹಾಲಿಗಿಂತ ಗಟ್ಟಿ. ಅದಕ್ಕೆ ಹೆಡಸು ಬಹಳ. ಒಂದು ಸೂಲದ ಹೈನವು ಸುಮಾರು ಒಂದು ವರ್ಷ ನಡೆಯುತ್ತದೆ. ಎಮ್ಮೆಗಳ ಸಂಖ್ಯೆಯು ಆಕಳುಗಳಿಗಿಂತ ಕಡಿಮೆ. ಇವುಗಳಿಗೆ ಖರ್ಚು ಹೆಚ್ಚು. ವಿಜಾಪುರ ಜಿಲ್ಹೆಯ ಗವಳಿಗರು ನಾಗಪುರ ಸೀಮೆಯ ಎಮ್ಮೆಗಳನ್ನು ಕಟ್ಟುವರು. ಇವು ಜವಾರಿಯ ಎಮ್ಮೆಗಳಿಗಿಂತ ಎತ್ತರವಾಗಿರುತ್ತವೆ. ಕೃಷ್ಣಾ ತೀರದ ಎಮ್ಮೆಗಳ ತುಪ್ಪವು ಎಲ್ಲಕ್ಕೂ ಮೇಲಾದದ್ದು. ಒಂದು ಎಮ್ಮೆಯ ಹೈನದ ಮೇಲೆ ೩-೪ ಜನರ ಹೊಟ್ಟೆ ಸಾಗುತ್ತದೆ. ಈ ಜಿಲ್ಹೆಯಲ್ಲಿ ಅಮೀನಗಡ, ವಿಜಾಪುರ, ಕಲಾದಗಿ, ಚಡಚಣ ಇವು ದನಗಳ ವ್ಯಾಪಾರದ ಮುಖ್ಯ ಸ್ಥಳಗಳು.

ವಿಜಾಪುರ ಜಿಲ್ಹೆಯಲ್ಲಿ ಕುರಿ ಆಡುಗಳ ಸಂಖ್ಯೆಯು ಬಹಳ. ಇವುಗಳನ್ನು ಉಣ್ಣೆಯ ಸಲುವಾಗಿಯೂ, ಹಾಲಿನ ಸಲುವಾಗಿಯೂ, ಮಾಂಸದ ಸಲುವಾಗಿಯೂ ಸಾಕುತ್ತಾರೆ. ಮಾರಾಟದಿಂದ ಕುರುಬರಿಗೆ ಆಗುವ ಲಾಭವು ಹೈನದಿಂದಲೂ, ಉಣ್ಣೆಯಿಂದಲೂ ಆಗುವದಿಲ್ಲ. ಇವು ಒಂದೊಂದು ಸೂಲಿಗೆ ೩ರಿಂದ ೫ರ ವರೆಗೆ ಮರಿಗಳನ್ನು ಈಯುವದರಿಂದ ಇವುಗಳ ಸಂತತಿಯು ಬಹು ಬೇಗ ಬೆಳೆಯುತ್ತದೆ. ಆಡಿನ ಹಾಲು ಶರೀರಕ್ಕೆ ಆರೋಗ್ಯಕರವು. ಆದರೆ ಇದಕ್ಕೆ ಉಗ್ರವಾಸನೆ ಬಹಳ. ಆದ್ದರಿಂದ ಇದರ ಹೈನವನ್ನು ಕುರುಬರು, ಮುಸಲ್ಮಾನರು, ಕುಂಬಾರರು ಇವರ ಹೊರತು ಇತರ ಜಾತಿಯವರು ಉಪಯೋಗಿಸುವದಿಲ್ಲ. ಕುರಿಗಳಿಗೆ ಆಹಾರದ ಖರ್ಚು ಬಹುಶಃ ಏನೂ ಆಗುವದಿಲ್ಲ. ಇವು ಹೊಳೆಹಳ್ಳಗಳ ದಂಡೆಯಲ್ಲಿಯೂ, ಬೀಳುಭೂಮಿಯಲ್ಲಿಯೂ, ಅಡವಿಯಲ್ಲಿಯೂ ಹುಟ್ಟುವ ಹುಲ್ಲನ್ನು ತಿಂದು ಜೀವಿಸುತ್ತವೆ. ಒಬ್ಬ ಹುಡುಗನು ನೂರಾರು ಕುರಿಗಳನ್ನು ಕಾಯುವನು. ಕುರಿಗಳಿಂದ ವರ್ಷದಲ್ಲಿ ಎರಡು ಸಾರೆ ಉಣ್ಣೆಯನ್ನು ಕತ್ತರಿಸುವರು. ಬಾಗಲಕೋಟೆ ತಾಲೂಕಿನಲ್ಲಿ ಈ ಉಣ್ಣೆಯಿಂದ ಕರೇ ಕಂಬಳಿಗಳು ವಿಶೇಷವಾಗಿ ಆಗುತ್ತವೆ.

ಕುದುರೆಗಳ ಉಪಯೋಗವು ನಮ್ಮ ಜನರಲ್ಲಿ ಕಡಿಮೆ. ದೊಡ್ಡ ಊರುಗಳಲ್ಲಿ ಟಾಂಗಾಗಳನ್ನು ಎಳೆಯಲಿಕ್ಕೂ, ಹಳ್ಳಿಗಳಲ್ಲಿ ಹತ್ತಿಕೊಂಡು ಊರೂರಿಗೆ ಹೋಗಲಿಕ್ಕೂ, ಖಣ ಸೀರೆಗಳ ವ್ಯಾಪಾರ ಮಾಡುವವರು ಗಂಟುಗಳನ್ನು ಹೇರಲಿಕ್ಕೂ ಇವುಗಳನ್ನು ಉಪಯೋಗಿಸುವರು. ದೊಡ್ಡದೊಡ್ಡ ಸರಕಾರೀ ಕಾಮದಾರರು ಹಳ್ಳಿಯ ಮೇಲೆ ಹಗಲೆಲ್ಲ ತಿರುಗಾಡುವ ಪ್ರಸಂಗ ಬರುವದರಿಂದ ಕುದುರೆಗಳನ್ನು ವಿಶೇಷವಾಗಿ ಕಟ್ಟುವರು.

ಕತ್ತೆಗಳನ್ನು ಉತ್ತಮ ಜಾತಿಯವರು ಮುಟ್ಟುವದಿಲ್ಲ. ವಾಡಿಕೆಯಾಗಿ ಅಗಸರು, ಕುಂಬಾರರು, ಕೊರವರು ಮೊದಲಾದ ಜಾತಿಗಳ ಜನರು ಕತ್ತೆಗಳನ್ನು ಕಟ್ಟುವರು. ಇವುಗಳನ್ನು ಸಾಕುವವರಿಗೆ ವೆಚ್ಚವು ಕಡಿಮೆ. ಇವು ಬೇಕಾದ ಕೆಲಸಕ್ಕೆ ಸಿದ್ಧವಾಗಿರುತ್ತವೆ. ಬೇಕಾದಾಗ ಇವುಗಳಿಂದ ಕೆಲಸ ಮಾಡಿಸಿಕೊಂಡು, ಕೆಲಸ ತೀರಿದ ಕೂಡಲೇ ಇವುಗಳನ್ನು ಬಿಟ್ಟುಬಿಡುವರು. ಈ ಬಡ ಪಶುಗಳು ತಿಪ್ಪಿಗಳಲ್ಲಿಯೂ, ಓಣಿಗಳಲ್ಲಿಯೂ ಸಿಕ್ಕದ್ದು ತಿಂದು ಜನ್ಮ ಕಳೆಯುವವು. ಇವುಗಳಿಗೆ ಹೊಲಸು ಸೇರುವದು. ಇವು ಭಾರವನ್ನು ಹೊತ್ತುಕೊಂಡು ವಿಶ್ರಾಂತಿ ಇಲ್ಲದೆ ಬೇಕಾದಷ್ಟು ದೂರ ನಡೆಯುವವು. ಆಹಾರ ಕಡಿಮೆ. ಆದ್ದರಿಂದ ಅಗಸರೂ, ಕುಂಬಾರರೂ ಇವುಗಳನ್ನು ಕಟ್ಟುವರು.

ಈ ಜಿಲ್ಹೆಯಲ್ಲಿ ಅಡವಿಗಳು ಕಡಿಮೆ ಇದ್ದದರಿಂದ ವನಪಶುಗಳು ಇಲ್ಲೆಂದು ಹೇಳಬಹುದು. ಆದರೂ ಬಾದಾಮಿ, ಬಾಗಲಕೋಟಿ, ಹುನಗುಂದ ತಾಲೂಕುಗಳಲ್ಲಿ ಚಿರ್ಚುಗಳು ಮಾತ್ರ ಅಲ್ಲಲ್ಲಿಗೆ ದೃಷ್ಟಿಗೆ ಬೀಳುವವು. ಈ ಜಿಲ್ಹೆಯಲ್ಲಿ ತೋಳಗಳೂ ನರಿಗಳೂ ಮಾತ್ರ ವಿಶೇಷವಾಗಿರುವವು.

ಈ ಅಡವಿಗಳಲ್ಲಿ ಕಾಡುಹಂದಿಗಳ ಸಂಖ್ಯೆಯು ದಿನದಿನಕ್ಕೆ ಬೆಳೆಯುತ್ತ ನಡೆದದೆ. ವಿಜಾಪುರದ ನೆರೆಯಲ್ಲಿ ಏದುಗಳು ಬಹಳ. ಈ ಜಿಲ್ಹೆಯ ಎಲ್ಲ ಕಡೆಯಲ್ಲಿಯೂ ಹಂದಿ, ಮೊಲ, ಚಿಗರೆಗಳು ಇರುವವು. ಎರೆನೆಲದ ಬೈಲು ಭೂಮಿಯಲ್ಲಿ ಚಿಗರೆಗಳು ಗುಂಪುಗುಂಪಾಗಿ ತಿರುಗುತ್ತವೆ.

ವಿಜಾಪುರ ಜಿಲ್ಹೆಯ ವನಪಶುಗಳಲ್ಲಿ ಚಿರ್ಚು, ತೋಳ, ನರಿ, ಕಾಡು ಹಂದಿ, ಚಿಗರಿ, ಮೊಲ ಇವೇ ಮುಖ್ಯವಾದವುಗಳು.

೪. **ಖನಿಜಗಳು.**— ವಿಜಾಪುರ ಜಿಲ್ಹೆಯಲ್ಲಿ ಮಲಾಪಹಾರಿ ಘಟಪ್ರಭಾ ನದಿಗಳ ನಡುವೆ ಸಾಣೇಕಲ್ಲಿನ ಕಣಿಗಳೂ, ಘಟಪ್ರಭಾ ಕೃಷ್ಣಾ ಇವುಗಳ ನಡುವೆ ಚೆಣಚಿಗಲ್ಲು, ಸುಣ್ಣದ ಕಲ್ಲು, ಉಸುಬಿನ ಕಲ್ಲು ಇವುಗಳ ಕಣಿಗಳೂ ಇರುವವು. ಕೃಷ್ಣೆಯ ಉತ್ತರದಲ್ಲ ಅಲ್ಲಲ್ಲಿಗೆ ಟ್ರ್ಯಾಪ್ ಶಿಲೆಗಳೇ ದೃಷ್ಟಿಗೆ ಬೀಳುವವು. ಟ್ರ್ಯಾಪ್ ಶಿಲೆಗಳಿದ್ದಲ್ಲಿ ನೆಲವು ತಗ್ಗುದಿನ್ನೆಗಳುಳ್ಳದ್ದು ಇದ್ದು ಭೂಮಿಯು ಅಷ್ಟು ಬೆಳೆಯುಳ್ಳದ್ದಲ್ಲ.

ಈ ಜಿಲ್ಹೆಯಲ್ಲಿ ಚಿನ್ನವು ಬಾದಾಮಿಯ ನೆರೆಯಲ್ಲಿ ಮಲಾಪಹಾರಿಯ ಉಳಲಿನಲ್ಲಿ ಕಣಗಳ ರೂಪದಿಂದ ದೊರೆಯುತ್ತದೆಂದು ಹೇಳುತ್ತಾರೆ.

ಕಬ್ಬಿಣವನ್ನು ಅದುರುಗಳಿಂದ ತೆಗೆಯುವ ಹಳೇ ಕುಲಿಮೆಗಳು ಈ ಜಿಲ್ಹೆ

ಯಲ್ಲಿ ಹಲವು ಕಡೆಗೆ ಇದ್ದವು. ವಿಲಾಯತಿಯ ಕಮ್ಮಾರರು ಅಲ್ಪಶ್ರಮದಿಂದ
ತಮ್ಮ ದೇಶದಲ್ಲಿ ಖಂಡಗಗಟ್ಲೆ ಕಬ್ಬಿಣವನ್ನು ಕಣಿಗಳಿಂದ ತೆಗೆದು, ಈ ದೇಶಕ್ಕೆ
ಅಗ್ಗದ ಧಾರಣೆಯಿಂದ ಮಾರಾಟಕ್ಕೆ ಕಳಿಸುವರು. ಆದರಿಂದ ಈ ದೇಶದ
ಕಬ್ಬಿಣವನ್ನು ತೆಗೆಯುವ ಹೋರೆಯು ಮುಗ್ಗಿಹೋಗಿದೆ.

ವಿಲಾಯತಿಯ ಅತಿ ಮಿದುವಾದ 'ಸಿಕ್ಕೇದ' ಕಬ್ಬಿಣವು ಈ ಪ್ರಾಂತದ
ಕಬ್ಬಿಣಕ್ಕೆ ಹೋಲುವದಿಲ್ಲ. ಸಿಕ್ಕೇದ ಕಬ್ಬಿಣಕ್ಕೆ ಸಹ ಸ್ವಲ್ಪ ಕಾವು ಕಡಿಮೆ
ಯಾದರೆ, ಹೊಡೆಯುವ ಸಮಯದಲ್ಲಿ ಅದು ಒಡೆಯುತ್ತದೆ. ಆದರೆ ಈ
ದೇಶದ ಕಬ್ಬಿಣವನ್ನು ಕಾವು ಪೂರಾ ಇಳಿದ ಮೇಲೆ ಸಹ ಹೊಡೆದು ನಿಗಚ
ಬಹುದು. ಆದಾಗ್ಯೂ ಸಾಧಾರಣ ವ್ಯವಹಾರದ ಆಯುಧಗಳಿಗೆ ಅಷ್ಟು
ಮೇಲಾದ ಕಬ್ಬಿಣವು ಬೇಕಾಗುವದಿಲ್ಲಾದ ಕಾರಣ, ಜನರು ವಿಲಾಯತಿಯ
ಅಗ್ಗದ ಕಬ್ಬಿಣವನ್ನೇ ಹೆಚ್ಚಿಗೆ ಕೊಳ್ಳುವರು.

ಬಾದಾಮಿಯ ಈಶಾನ್ಯದಲ್ಲಿ ಎಂಟು ಮೈಲಿನ ಮೇಲೆ ಹನುಮಾಪುರದಲ್ಲಿ
ಮಧ್ಯಮ ಪ್ರತಿಯ ಗೋಮೇದದ ಜಾತಿಯ ಹರಳುಗಳು ಸಿಗುತ್ತವೆ.

ಡೋಣೀ ನದಿಯ ದಂಡೆಯ ಮೇಲೆ ಪೂರ್ವಕಾಲದಲ್ಲಿ ಮಣ್ಣುಪ್ಪು
ಹುಟ್ಟುತ್ತಿತ್ತು. ಕೆಲವು ಕಡೆಯಲ್ಲಿ ಸೋರುಪ್ಪು ಈಗ್ಯೂ ಹುಟ್ಟುತ್ತದೆ.

ಸುಣ್ಣದ ಕಲ್ಲಿನಲ್ಲಿ ಅನೇಕ ಜಾತಿಗಳಿರುವವು. ಅವುಗಳಿಗೆ ಬಿಳಿದು, ಕಪ್ಪು,
ನೀಲಿ, ಹಸರು, ಗುಲಾಬಿ, ಬೂದಿಬಣ್ಣ ಮುಂತಾದ ನಾನಾ ಪ್ರಕಾರದ ಸೊಬ
ಗಿನ ಬಣ್ಣಗಳಿರುವವು. ತಾಳೀಕೋಟಿಯಲ್ಲಿಯೂ, ಸಿಂದಗಿ ತಾಲೂಕಿನ
ಹೊನ್ನಳ್ಳಿ ಎಂಬ ಗ್ರಾಮದಲ್ಲಿಯೂ ಮೇಲಾದ ಸಂಗಮರವರೀಕಲ್ಲುಗಳು
ದೊರೆಯುತ್ತವೆ. ವಿಜಾಪುರದ ಭವ್ಯವಾದ ಇಮಾರತುಗಳಲ್ಲಿ ತಾಳೀಕೋಟಿ
ಯಿಂದ ತಂದ ಊದೀಬಣ್ಣದ ಸಂಗಮರವರೀಕಲ್ಲುಗಳನ್ನು ನೋಡಬಹುದು.
ಇದಲ್ಲದೆ ತಾಳೀಕೋಟಿಯ ಕಣಿಯಲ್ಲಿ ದೊರೆಯುವ ಸೇಡೀಕಲ್ಲೆಂಬ ಜಾತಿಯ
ಕಲ್ಲು ಮುದ್ರಣಕೆಲಸಕ್ಕೆ ಬರುತ್ತದೆ.

ಬಾದಾಮಿ, ಬಾಗಲಕೋಟೆ, ಮುದ್ದೇಬಿಹಾಳ, ಹುನಗುಂದ ತಾಲೂಕು
ಗಳಲ್ಲಿ ಉಸುಬಿನ ಕಲ್ಲುಗಳು ದೊರೆಯುತ್ತವೆ. ಈ ಕಲ್ಲುಗಳಿಂದ ಬೀಸುವ
ಕಲ್ಲುಗಳನ್ನೂ, ಸಾಣೇಕಲ್ಲುಗಳನ್ನೂ, ಹಾದಿಯ ಮೇಲೆ ಎಳೆಯುವ ರೂಲು
ಗಳನ್ನೂ ಮಾಡುವರು. ಕಲಾದಗಿಯ ಆಗ್ನೇಯಕ್ಕೆ ನಾಲ್ಕು ಮೈಲಿನ ಮೇಲೆ
ಇರುವ ಶಲ್ಲೀಕೇರಿಯಲ್ಲಿ, ಮೂರ್ತಿಯ ಕಲ್ಲುಗಳೂ, ಸ್ಲೇಟಿನ ಕಲ್ಲುಗಳೂ

ದೊರೆಯುತ್ತವೆ. ಆದರೆ ಸ್ಲೇಟುಗಳನ್ನು ಮಾಡುವ ಕೆಲಸವು ಎಲ್ಲಿಯೂ ನಡೆದಿಲ್ಲ.

ಇದಲ್ಲದೆ ನಾನಾ ಪ್ರಕಾರದ ಬಿರುಸು, ಮಿದುವು ಜಾತಿಯ ಕಲ್ಲುಗಳು ಈ ಜಿಲ್ಹೆಯ ಬೇರೆ ಬೇರೆ ತಾಲೂಕುಗಳಲ್ಲಿಯೂ ವಿಪುಲವಾಗಿ ದೊರೆಯುತ್ತವೆ. ಅವೆಲ್ಲ ಕಲ್ಲುಗಳನ್ನು ಇಮಾರತಿಯ ಕೆಲಸಕ್ಕೆ ಉಪಯೋಗಿಸುವರು. ಬಾಗಲಕೋಟಿ ತಾಲೂಕಿನೊಳಗಿನ ಬೀಳಗಿಯಲ್ಲಿಯೂ, ಮುದ್ದೇಬಿಹಾಳ ತಾಲೂಕಿನ ನಾಲತವಾಡ ಎಂಬ ಗ್ರಾಮದಲ್ಲಿಯೂ, ಬಾದಾಮಿ, ಬಾಗಲಕೋಟಿ, ಹುನಗುಂದ ಮುಂತಾದ ಕಡೆಯಲ್ಲಿಯೂ, ಹತ್ತು ಹದಿನೈದು ಫೂಟು ಉದ್ದವಾದ ನಾನಾ ಪ್ರಕಾರದ ಶಿಲೆಗಳು ಇಮಾರತಿಯ ಕೆಲಸಕ್ಕೆ ಬರುತ್ತವೆ. ಬೀಳಗಿಯಲ್ಲಿ ಒಂದು ಶಿವಾಲಯದ ಮುಂದೆ ಇರುವ ಗುಡ್ಡದ ಮೇಲೆ ಮೂವತ್ತೈದು ಫೂಟು ಉದ್ದವಾದ ಒಂದೇ ಅಖಂಡ ಕಲ್ಲಿನ ದೀಪಸ್ತಂಭವನ್ನು ನಿಲ್ಲಿಸಿದ್ದಾರೆ.

---

# ೫ನೆಯ ಪ್ರಕರಣ.

## ಉದ್ಯೋಗ.

ಮನುಷ್ಯರಿಗೆ ತಿನ್ನಲಿಕ್ಕೆ ಕಾಳೂ, ಹೊದ್ದುಕೊಳ್ಳಲಿಕ್ಕೆ ಅರಿವೆಯೂ ಅತ್ಯವಶ್ಯವಾದ ಪದಾರ್ಥಗಳಿರುವದರಿಂದ ಮನುಷ್ಯನ ಉದ್ಯೋಗಗಳಲ್ಲಿ ಕೃಷಿಯೂ ಅರಿವೆಗಳನ್ನು ನೇಯುವದೂ ಅತಿ ಮಹತ್ವವುಳ್ಳ ಉದ್ಯೋಗಗಳಾಗಿರುತ್ತವೆ.

ಈ ಜಿಲ್ಹೆಯಲ್ಲಿ ಒಕ್ಕಲತನವು ಹೆಚ್ಚಾಗಿ ನಡೆಯುತ್ತದೆಂದು ಇಲ್ಲಿಯ ಹುಟ್ಟುವಳಿಯಿಂದ ಸ್ಪಷ್ಟವಾಗುವದು. ವಿಜಾಪುರ ಜಿಲ್ಹೆಯಲ್ಲಿರುವ ಪ್ರತಿಯೊಂದು ಹಳ್ಳಿಯ ಜನರು ಮುಖ್ಯವಾಗಿ ಹೊಲಗಳಿಂದಲೇ ಉಪಜೀವಿಸುವರೆಂದು ಸಾಮಾನ್ಯವಾಗಿ ಹೇಳಬಹುದು. ಹೊಲಗೆಲಸದಲ್ಲಿ ತೊಡಗಿದವರ ಸಂಖ್ಯೆಯು ಈ ಜಿಲ್ಹೆಯಲ್ಲಿ ೧೦೦ರಲ್ಲಿ ೭೫·೯ಲ ಇರುವದು. ಈ ಉದ್ಯೋಗದಲ್ಲಿ ಮುಖ್ಯವಾಗಿ ಲಿಂಗಾಯತರೂ, ಮರಾಠರೂ, ಮುಸಲ್ಮಾನರೂ, ಬ್ರಾಹ್ಮಣರೂ ತೊಡಗಿರುವರು. ಇವರಲ್ಲಿ ಲಿಂಗಾಯತರು ಒಳ್ಳೇ ಸ್ಥಿತಿಯಲ್ಲಿರುವರು. ಲಿಂಗಾಯತರಲ್ಲಿ ಹಲವರು ಬಡ್ಡೀ ವ್ಯವಹಾರವನ್ನು ಮಾಡುವರು. ಇವರಿಗೆ ವ್ಯಾಪಾರದ ಒಲವು ಹೆಚ್ಚು ಉಂಟು. ಹೊಲಗೆಲಸದ ಉದ್ಯೋಗವನ್ನು ಮಾಡುವ ಬ್ರಾಹ್ಮಣರ ಸಂಖ್ಯೆಯು ಬಹಳ ಕಡಿಮೆ. ಇವರು ಸ್ವಂತವಾಗಿ ದುಡಿಯುವದಿಲ್ಲ. ಕೂಲಿಯವರನ್ನು ಹಚ್ಚಿ ದುಡಿಸುವರು. ಇವರು ಬಹಳವಾಗಿ ಹೊಲಗಳನ್ನು ಲಾವಣಿಗೆ ಇಲ್ಲವೆ ಪಾಲಿಗೆ ಕೊಡುವರು.

ಈ ಜಿಲ್ಹೆಯಲ್ಲಿ ನಡೆಯುವ ಕೈಗಾರಿಕೆಗಳಲ್ಲಿ ಬಡಿಗತನ, ಕಮ್ಮಾರಿಕೆ, ಉಪ್ಪಾರಿಕೆ, ಕುಂಬಾರಿಕೆ ಮೊದಲಾದ ತೀರ ಸಾಧಾರಣ ಪ್ರತಿಯ ಉದ್ಯೋಗಗಳನ್ನು ಮಾಡುವ ಜನರು ಪ್ರತಿಯೊಂದು ಊರಲ್ಲಿಯೂ, ಹಳ್ಳಿಗಳಲ್ಲಿಯೂ ಇರುವರು. ಆದರೆ ಇವುಗಳಲ್ಲಿ ವಿಶೇಷವಾಗಿ ನಡೆಯುವ ಕೈಗಾರಿಕೆಯು ಹತ್ತಿಯ ಕೆಲಸಕ್ಕೆ ಸಂಬಂಧಿಸಿದ್ದಿರುವದು. ಯಾಕಂದರೆ ಈ ಪ್ರಾಂತದಲ್ಲಿ ಹತ್ತಿಯು ಬೆಳೆಯಲಿಕ್ಕೆ ಅನುಕೂಲವಾದ ಭೂಮಿಯು ಬಹಳ ಅದೆ. ಜನರಾದರೂ ಮುಖ್ಯವಾಗಿ ನೂಲಿನ ಬಟ್ಟೆಗಳನ್ನೇ ತೊಡುವರು. ಅನೇಕ ವರ್ಷಗಳಿಂದ ನಡೆದುಬಂದ ಕೈಗಾರಿಕೆಗಳಲ್ಲಿ ಹತ್ತಿಯನ್ನು ಅರಿಯುವದು, ನೂಲುವದು, ನೇಯುವದು ಇವು ಮುಖ್ಯವಾದವು ಇರುತ್ತವೆ. ಹತ್ತಿಯನ್ನು ಅರಿ

ಯುವ ಕೆಲಸವನ್ನು ಎಲ್ಲ ಕಡೆಯಲ್ಲಿ ಒಕ್ಕಲಿಗರ ಹೆಂಗಸರು ಮಾಡುತ್ತಾರೆ. ಆದರೆ ಇತ್ತಿತ್ತಲಾಗಿ ಹತ್ತಿಯನ್ನು ಅರಿಯುವ ಗಿರಣಿಗಳು ಹೆಚ್ಚಾಗಹತ್ತಿದ್ದರಿಂದಲೂ, ಅವುಗಳಲ್ಲಿ ಅರಿಸಿದ ಅರಳಿಗೆ ಬೆಲೆಯು ಹೆಚ್ಚು ಬರಹತ್ತಿದ್ದರಿಂದಲೂ, ಅರಿಯುವ ಖರ್ಚು ಕಡಿಮೆ ಬರಹತ್ತಿದ್ದರಿಂದಲೂ ಒಕ್ಕಲಿಗರು ತಮ್ಮ ಹತ್ತಿಯನ್ನು ಗಿರಣಿಗಳಲ್ಲಿಯೇ ಅರಿಸಹತ್ತಿರುವರು. ಸದ್ಯಕ್ಕೆ ಹತ್ತಿಯನ್ನು ಅರಿಯುವ ಗಿರಣಿಗಳು ಬಾಗಲಕೋಟಿ, ವಿಜಾಪುರ, ಕಲಾದಗಿ, ಇಲಕಲ್ಲ, ತಾಳೀಕೋಟಿ ಮೊದಲಾದ ಸ್ಥಳಗಳಲ್ಲಿ ಅವೆ. ಈ ಜಿಲ್ಹೆಯಲ್ಲಿ ನೂಲುವ ಮತ್ತು ನೇಯುವ ಗಿರಣಿಗಳು ಇಲ್ಲ. ಆದ್ದರಿಂದ ಪರದೇಶದ ನೂಲಿನ ಬಟ್ಟೆಗಳು ವಿಶೇಷವಾಗಿ ಬರುತ್ತವೆ. ಯಂತ್ರಗಳಿಂದ ಮಾಡಿಸಿದ ಕೆಲಸಕ್ಕೆ ಕೂಲಿ ಕಡಿಮೆ; ಖರ್ಚು ಕಡಿಮೆ. ಆದ್ದರಿಂದ ಅವು ಅಗ್ಗವಾಗಿ ದೊರೆಯುತ್ತವೆ. ಇದಲ್ಲದೆ ಅವು ನೋಡಲಿಕ್ಕೂ ಚಂದ ಕಾಣುತ್ತವೆ. ಆದರೆ ಅವು ಇಲ್ಲಿಯ ಮಗ್ಗದ ಮೇಲೆ ತಯಾರಾದ ಬಟ್ಟೆಗಳಷ್ಟು ತಾಳುವದಿಲ್ಲ. ಆದ್ದರಿಂದ ಬಡಬಗ್ಗರೂ, ಕೂಲಿಕಾರರೂ, ಒಕ್ಕಲಿಗರೂ ಇಲ್ಲಿಯ ಅರಿವೆಗಳನ್ನೇ ಉಪಯೋಗಿಸುವದುಂಟು. ಹೀಗಾಗಿ ನಮ್ಮಲ್ಲಿ ಜವಾರೀ ಬಟ್ಟೆಗಳನ್ನು ತಯಾರು ಮಾಡುವ ಉದ್ಯೋಗವು ಇನ್ನೂ ನಡೆದದೆ.

ಇದಲ್ಲದೆ ನಮ್ಮ ಜನರಲ್ಲಿ ಉಪಯೋಗಿಸುವ ಹಚ್ಚಡ, ಜಮುಖಾನೆ, ರುಮಾಲ, ಕಂಬಳಿ, ಜಾಜಮು ಮತ್ತು ಎಲ್ಲಕ್ಕೂ ಮಹತ್ವದ್ದೆಂದರೆ ಅಂಚಿನ ಧೋತರಗಳು, ಹೆಂಗಸರ ಸೀರೆ ಕುಬಸಗಳು ಪರದೇಶಗಳಿಂದ ಬರುವದಿಲ್ಲ. ಇವು ಇಲ್ಲಿಯೇ ತಯಾರಾಗುತ್ತವೆ. ಆದರೂ ಇವುಗಳಲ್ಲಿ ಉಪಯೋಗಿಸುವ ನೂಲನ್ನು ನೇಕಾರರು ಮುಂಬಯಿಯಿಂದಾಗಲೀ, ವಿಲಾಯತಿಯಿಂದಾಗಲೀ ತರಿಸುವದುಂಟು. ಬಾಗಲಕೋಟಿ, ಇಲಕಲ್ಲ, ಗುಳೇದಗುಡ್ಡ, ಕಮತಗಿ, ಬೀಳಗಿ, ಕೆರೂರು ಮೊದಲಾದ ಊರುಗಳಲ್ಲಿ ನೇಕಾರಿಕೆಯು ವಿಶೇಷವಾಗಿ ನಡೆಯುತ್ತದೆ. ಇವುಗಳಲ್ಲಿ ಸೀರೆಗಳು, ಖಣಗಳು, ದೋತರಗಳು ವಿಶೇಷವಾಗಿ ಆಗುತ್ತವೆ. ಬಾದಾಮಿಯಲ್ಲಿ ಅಂಗಿಯ ಚೀಟುಗಳು ಪ್ರಸಿದ್ಧ. ಕೊಲ್ಹಾರದಲ್ಲಿಯೂ ವಿಜಾಪುರ ಜೇಲಿನಲ್ಲಿಯೂ ಜಮುಖಾನೆಗಳು ತಯಾರಾಗುತ್ತವೆ. ತಾಳೀಕೋಟಿಯಲ್ಲಿ ಜಾಜಮುಗಳೂ, ಕರಳಿಯ ಹಚ್ಚಡಗಳೂ ಆಗುತ್ತವೆ. ಕುರುಬರು ಕಂಬಳಿಗಳನ್ನು ನೇಯುವರು. ಇವು ಎಲ್ಲ ತಾಲೂಕುಗಳಲ್ಲಿ ಆಗುತ್ತಿದ್ದಾಗ್ಯೂ ಮೇಲಾದ ಕಂಬಳಿಗಳು ಬಾಗಲಕೋಟಿ ತಾಲೂಕಿನಲ್ಲಿ ಆಗುತ್ತವೆ.

ನಮ್ಮಲ್ಲಿಯ ಜನರು ಬಹುತರವಾಗಿ ತಾಮ್ರ ಇಲ್ಲವೆ ಹಿತ್ತಾಳಿಯ ಪಾತ್ರೆಗಳನ್ನು ಉಪಯೋಗಿಸುವರು. ಈ ಜಿಲ್ಹೆಯಲ್ಲಿ ಪಾತ್ರೆಗಳನ್ನು ಮಾಡುವ ಉದ್ಯೋಗವು ಕಡಿಮೆ. ಇಲ್ಲೆಂದರೂ ಅಡ್ಡಿ ಇಲ್ಲ. ಆದರೂ ಬಾಗಲಕೋಟೆ ವಿಜಾಪುರಗಳಲ್ಲಿ ದೊಡ್ಡದೊಡ್ಡ ಹಂಡೆಗಳನ್ನೂ, ಕೊಡಗಳನ್ನೂ, ತಪೇಲಿಗಳನ್ನೂ ಮುಂಬಯಿಯಿಂದ ತಗಡು ತರಿಸಿ ಮಾಡುವರು. ಉಳಿದ ಸಣ್ಣಸಣ್ಣ ಪಾತ್ರೆ ಮೊದಲಾದವುಗಳೆಲ್ಲ ಬಹುತರವಾಗಿ ಹುಬ್ಬಳ್ಳಿ, ತೇರದಾಳ, ಹನಗಂಡಿ ಮೊದಲಾದ ಸ್ಥಳಗಳಿಂದ ಬರುವವು. ಕಮತಗಿಯಲ್ಲಿ ಮೇಲಾದ ತಬಕಗಳು ಹುಟ್ಟುತ್ತಿದ್ದವು. ಈಗ್ಗೆ ಆ ಉದ್ಯೋಗವು ಅಲ್ಲಿ ನಿಂತದೆ. ಇಂಡಿಯಲ್ಲಿ ಹಿತ್ತಾಳಿಯ ದೌತಿಗಳು ಆಗುತ್ತವೆ.

ವಿಜಾಪುರ ಜಿಲ್ಹೆಯಲ್ಲಿ ಕಬ್ಬಿಣದ ಅದುರು ಕೆಲವು ಕಡೆಯಲ್ಲಿ ದೊರೆಯುತ್ತಿದ್ದಾಗ್ಯೂ ಅದರಿಂದ ಕಬ್ಬಿಣ ತೆಗೆಯುವ ಉದ್ಯೋಗವು ಮುಗ್ಗಿಹೋಗಿದೆ. ಯಾಕಂದರೆ ಪರದೇಶದ ಕಬ್ಬಿಣವು ಬಹಳ ಅಗ್ಗವಾಗಿ ಸಿಗುತ್ತದೆ. ಅಲ್ಲಿಯ ಜನರಿಗೆ ಕಬ್ಬಿಣ ಕಲ್ಲಿದ್ದಲಿಗಳು ಒಂದೇ ಕಡೆಯಲ್ಲಿ ಹೇರಳವಾಗಿ ದೊರೆಯುತ್ತವೆ. ಆದ್ದರಿಂದ ಅವರು ಯಂತ್ರಗಳಿಂದ ಕಬ್ಬಿಣದ ಅದುರುಗಳನ್ನು ಕರಗಿಸುತ್ತಾರೆ. ಅನೇಕ ತರದ ಸಾಮಾನುಗಳನ್ನು ಮಾಡುತ್ತಾರೆ. ನಮಗೆ ಬೇಕಾಗುವ ಸಣ್ಣಸಣ್ಣ ಮೊಳೆಗಳಿಂದ ಅತಿ ದೊಡ್ಡ ಯಂತ್ರಗಳ ವರೆಗೆ ಎಲ್ಲ ಕಬ್ಬಿಣದ ಸಾಮಾನುಗಳೂ ಬಹುಶಃ ಪರದೇಶದಿಂದ, ಮುಖ್ಯವಾಗಿ ವಿಲಾಯತಿಯಿಂದ ಬರುತ್ತವೆ. ನಮ್ಮ ಜನರು ಮನೆಯಲ್ಲಿ ಉಪಯೋಗಿಸುವ ಈಳಿಗೆ, ಹಾರಿ ಮೊದಲಾದ ಸಣ್ಣ ಪದಾರ್ಥಗಳನ್ನೂ ಹೊಲಗೆಲಸದಲ್ಲಿ ಉಪಯೋಗವಾಗುವ ಕೆಲವು ಆಯುಧಗಳನ್ನೂ ಕಮ್ಮಾರರು ಅಗ್ಗವಾದ ವಿಲಾಯತಿಯ ಕಬ್ಬಿಣದಿಂದ ಮಾಡುವರು.

ಇವುಗಳ ಹೊರತು ವಿಜಾಪುರದಲ್ಲಿ ಚಲೋ ಊದಿನಕಡ್ಡಿಗಳೂ ಚರ್ಮದ ಜೋಡೂ ತಯಾರಾಗುತ್ತವೆ.

# ೬ನೆಯ ಪ್ರಕರಣ.

## ಮಾರ್ಗಗಳು.

ಮಾರ್ಗಗಳಲ್ಲಿ ಜಲಮಾರ್ಗಗಳು, ರೇಲ್ವೆಮಾರ್ಗಗಳು, ಲೈನಮಾರ್ಗಗಳು ಎಂದು ಮೂರು ಭೇದಗಳುಂಟು. ಜಲಮಾರ್ಗಗಳು ಎಲ್ಲಕ್ಕೂ ಮೇಲಾದವು. ಈ ಜಿಲ್ಹೆಯಲ್ಲಿ ಜಲಮಾರ್ಗಕ್ಕೆ ಅನುಕೂಲವಾದ ನದಿಯು ಒಂದೂ ಇಲ್ಲ. ರೇಲ್ವೆಮಾರ್ಗಗಳಿಂದ ಜನರ ಸಂಚಾರಕ್ಕೂ ಪದಾರ್ಥಗಳ ವಿನಿಮಯಕ್ಕೂ ವ್ಯಾಪಾರಕ್ಕೂ ಬಹಳ ಅನುಕೂಲವಾಗುವದು.

ಲೈನಮಾರ್ಗಗಳಿಂದ ಒಳದೇಶದ ವ್ಯಾಪಾರಕ್ಕೆ ಅನುಕೂಲವಾಗುವದು. ಪಕ್ಕಾಮಾರ್ಗಗಳು ಮಳೆಗಾಲದಲ್ಲಿ ಸಹ ಕೆಡುವದಿಲ್ಲ. ಮಾರ್ಗಗಳನ್ನು ಮಾಡಲಿಕ್ಕೆ ಮುರಮು* ಮತ್ತು ಕಲ್ಲುಗಳ ಅನುಕೂಲವಿರಬೇಕು. ಈ ಜಿಲ್ಹೆಯ ಪ್ರತಿಯೊಂದು ಭಾಗದಲ್ಲಿ ಈ ತರದ ಮಾರ್ಗಗಳನ್ನು ಮಾಡಲಿಕ್ಕೆ ಅನುಕೂಲವಿದೆ.

ಬ್ರಿಟಿಷ ಸರಕಾರದವರು ಬರುವ ಮೊದಲು ಈ ಸೀಮೆಯಲ್ಲಿ ಅಷ್ಟು ಲೈನ ಮಾರ್ಗಗಳಿದ್ದಿಲ್ಲ. ಬಂಡಿಗಳೂ ಕಡಿಮೆ. ಅದಿಲ್‌ಶಾಹೀ ರಾಜ್ಯದ ಸಮಾಪ್ತಿಯನಂತರ ಕೆಲದಿವಸ ಇವುಗಳ ಬೆಳಿಗೆಯೇ ಇದ್ದಿಲ್ಲ. ದೂರದಿಂದ ತರಿಸುವ ಸರಕುಗಳನ್ನೂ ದೂರದೇಶಕ್ಕೆ ಕಳಿಸುವ ಸರಕುಗಳನ್ನೂ, ಕತ್ತೆ, ದನಗಳ ಮೇಲೆ ಕಳಿಸಬೇಕಾಗುತ್ತಿತ್ತು. ಬ್ರಿಟಿಷ ಸರಕಾರದ ಅಮಲು ಪ್ರಾರಂಭವಾದಂದಿನಿಂದ ಈ ಜಿಲ್ಹೆಯಲ್ಲಿ ಮಾರ್ಗಗಳು ಹೆಚ್ಚಾಗಲಿಕ್ಕೆ ಅನುಕೂಲವಾಯಿತು. ಲೈನಮಾರ್ಗಗಳಲ್ಲಿ ಇಲಾಖೆಯ ಸರಕಾರದವರು ಮಾಡಿಸಿದ ಮಾರ್ಗಗಳೂ, ಲೋಕಲ್ ಬೋರ್ಡಿನವರು ಮಾಡಿಸಿದ ಮಾರ್ಗಗಳೂ ಉಂಟು. ಇವೆಲ್ಲ ಬಹುತರ ಪಕ್ಕಾಮಾರ್ಗಗಳೇ ಇರುವವು.

ಈ ಜಿಲ್ಹೆಯೊಳಗಿನ ಮುಖ್ಯ ಮುಖ್ಯ ಮಾರ್ಗಗಳು ಕೆಳಗೆ ಕಾಣಿಸಿವೆ.

೧. ವಿಜಾಪುರ ಹುಬ್ಬಳ್ಳಿಯ ಮಾರ್ಗ.—ಇದು ಈ ಜಿಲ್ಹೆಯಲ್ಲಿ ಮುಖ್ಯವಾದ ಮಾರ್ಗವು. ವಿಜಾಪುರದಿಂದ ಪ್ರಾರಂಭವಾಗಿ ಮುಳವಾಡ, ಕೊಲ್ಹಾರ, ಅನಗವಾಡಿ, ಹೊಲಗೇರಿ, ಕೆರೂರು, ಗೋವನಕೊಪ್ಪಗಳ ಮೇಲಿಂದ ಹುಬ್ಬಳ್ಳಿಗೆ ಹೋಗಿದೆ. ಕೊಲ್ಹಾರದ ಹತ್ತರ ಕೃಷ್ಣಾ ನದಿಗೆ ಪೂಲು ಕಟ್ಟುವ ಕೆಲಸ ನಡೆ

---

* ಮುರಮು ಅಂದರೆ ಉರುಟಾದ ಹರಳುಳ್ಳ ಕೆಂಪು ಮಣ್ಣು.

ದಿದೆ. ಅನಗವಾಡಿಯ ಹತ್ತರ ಘಟಪ್ರಭಾ ನದಿಗೆ ಪೂಲು ಕಟ್ಟುವ ಕೆಲಸ ಮುಗಿದದೆ. ಗೋವನಕೊಪ್ಪದ ಹತ್ತರ ಮಲಪ್ರಭಾ ನದಿಯನ್ನು ದಾಟಬೇಕಾಗುತ್ತದೆ. ಹೊನಗನ ಹಳ್ಳಿಯ ಹತ್ತರ ಡೋಣಿಯನ್ನು ದಾಟುವಾಗ ಅಲ್ಲಿ ಒಂದು ಪೂಲನ್ನು ಕಟ್ಟಿರುವರು.

೨. ಬಾಗಲಕೋಟಿ ಬೆಳಗಾಂವಿಯ ಮಾರ್ಗವು.— ಇದು ಬಾಗಲಕೋಟಿಯಿಂದ ಪ್ರಾರಂಭವಾಗಿ, ತುಲಸಿಗಿರೀ ಕಲಾದಗಿಗಳ ಮೇಲಿಂದ ಹಾಯ್ದು ಖಜ್ಜೀಡೋಣಿಯ ಆಚೆಗೆ ಈ ಜಿಲ್ಹೆಯನ್ನು ದಾಟುತ್ತದೆ. ಮುಂದೆ ಮುಧೋಳ ಸಂಸ್ಥಾನದೊಳಗಿಂದ ಹಾಯ್ದು ಬೆಳಗಾಂವಿಗೆ ಹೋಗುತ್ತದೆ. ಬಾಗಲಕೋಟಿಯಿಂದ ಕಲಾದಗಿಯ ವರೆಗೆ ಒಳ್ಳೇ ರಹದಾರಿ ಇದ್ದು ಇಡೀ ಮಾರ್ಗವು ಪಕ್ಕಾ ರಸ್ತೆಯಿರುತ್ತದೆ.

೩. ಕಲಾದಗಿ ಕೋಣದ ಮಾರ್ಗ.— ಇದು ಕಲಾದಗಿಯಿಂದ ಪ್ರಾರಂಭವಾಗಿ ಶಲ್ಲೀಕೇರಿ, ಕಟಗೇರಿ, ಬಾದಾಮಿಗಳ ಮೇಲಿಂದ ಹಾಯ್ದು ಜಾಲಿಹಾಳದ ಆಚೆಗೆ ಈ ಜಿಲ್ಹೆಯನ್ನು ದಾಟುತ್ತದೆ. ಈ ಮಾರ್ಗವು ಮುರಮು ಹಾಕಿ ಮಾಡಿದ ಪಕ್ಕಾರಸ್ತೆಯಲ್ಲ. ಈ ಮಾರ್ಗದಿಂದ ಹೋಗಬರುವ ವ್ಯವಹಾರವೂ ವಿಶೇಷವಿಲ್ಲ.

೪. ವಿಜಾಪುರ ತಾಳೀಕೋಟಿಯ ಮಾರ್ಗ.— ಇದು ಹಿಪ್ಪರಗಿ ಕೊಂಡಗುಳಿ ತುಂಬಗಿಗಳ ಮೇಲಿಂದ ತಾಳೀಕೋಟಿಗೆ ಹೋಗಿದೆ. ತಾಳೀಕೋಟಿಯು ವ್ಯಾಪಾರದ ಪಡಿಮೂಲೆಯಾಗಿರುವದರಿಂದಲೂ ಆ ಕಡೆಗೆ ಉಗಿಬಂಡಿಯ ಮಾರ್ಗವು ಇಲ್ಲದ್ದರಿಂದಲೂ ಈ ಮಾರ್ಗದಲ್ಲಿ ಆಡ್ಡಾಡುವ ವ್ಯಾಪಾರದ ಬಂಡಿಗಳಿಗೆ ತೆರವಿಲ್ಲ.

೫. ಇಂಡಿ ಇಲಕಲ್ಲುಗಳ ಮಾರ್ಗ.— ಇದು ಈ ಜಿಲ್ಹೆಯಲ್ಲಿ ಎಲ್ಲಕ್ಕೂ ಉದ್ದವಾದ ಮಾರ್ಗವು. ರಸ್ತೆಯೂ ಸಾಧಾರಣ ನೆಟ್ಟಗಿದೆ. ರಹದಾರಿಯು ತಕ್ಕಮಟ್ಟಿಗೆ ಇದೆ. ಈ ಮಾರ್ಗವು ಇಂಡಿಯಿಂದ ಪ್ರಾರಂಭವಾಗಿ ತಾಂಬೆ, ಹಿಪ್ಪರಗಿ, ಮುದ್ದೇಬಿಹಾಳ, ತಂಗಡಗಿ, ಹುನಗುಂದಗಳ ಮೇಲೆ ಹಾಯ್ದು ಇಲಕಲ್ಲಿಗೆ ಹೋಗಿದೆ.

೬. ವಿಜಾಪುರ ಸೊಲ್ಲಾಪುರ ಮಾರ್ಗ.— ಇದು ವಿಜಾಪುರದಿಂದ ಪ್ರಾರಂಭವಾಗಿ, ಹೊರತಿ, ಧೂಳಖೇಡಗಳ ಮೇಲೆ ಹಾಯ್ದು ಭೀಮಾ ನದಿಯನ್ನು ದಾಟಿ ನಮ್ಮ ಜಿಲ್ಹೆಯನ್ನು ಬಿಡುತ್ತದೆ. ಈ ಮಾರ್ಗವು ನೆಟ್ಟಗಿದ್ದು ರಹದಾರಿಯು ವಿಶೇಷವಾಗಿದೆ.

೭. ವಿಜಾಪುರ ಕೊಲ್ಹಾಪುರದ ಮಾರ್ಗ.—ಈ ಮಾರ್ಗವು ವಿಜಾಪುರದಿಂದ ಹೊರಟು ಜಮಖಂಡಿಯ ಸಂಸ್ಥಾನದೊಳಗಿಂದ ಹಾಯ್ದು ಮುಂದೆ ಈ ಜಿಲ್ಹೆಯ ಭಾಗವಾದ ಹೊನವಾಡದ ಹತ್ತರ ಹಾಯ್ದು, ಬೆಳಗಾಂವ ಜಿಲ್ಹೆಯನ್ನು ಸೇರಿ ಮುಂದೆ ಕೊಲ್ಹಾಪುರಕ್ಕೆ ಹೋಗಿರುವದು. ಇತ್ತಕಡೆಗೂ ಉಗಿಬಂಡಿಯ ಮಾರ್ಗವು ಇಲ್ಲದ್ದರಿಂದಲೂ ವ್ಯಾಪಾರದ ಪಟ್ಟಣಗಳು ಹೆಚ್ಚಿರುವದರಿಂದಲೂ, ಬಂಡಿಗಳ ಹಾಗು ಹೋಗಬರುವ ಜನರ ತುಳಕಲವು ಹೆಚ್ಚಿಗಿರುತ್ತದೆ.

ಇವಲ್ಲದೆ ಚಿಮ್ಮಲಗಿಯಿಂದ ಮುದ್ದೇಬಿಹಾಳಕ್ಕೂ, ಮುದ್ದೇಬಿಹಾಳದಿಂದ ತಾಳೀಕೋಟಿ ನಾಲತವಾಡಗಳ ಕಡೆಗೂ ಲೈನಮಾರ್ಗಗಳಿರುತ್ತವೆ. ಇವು ವ್ಯಾಪಾರದ ಪಡಿಮೂಲಿಗಳಾಗಿರುವದರಿಂದ ಇಲ್ಲಿ ವ್ಯಾಪಾರದ ಬಂಡಿಗಳು ಓಡಾಡುವದು ಬಹಳ. ಒಂದು ಊರಿಂದ ಮತ್ತೊಂದು ಊರಿಗೆ ಹೋಗಬಹುದಾದ ಸಣ್ಣಪುಟ್ಟ ಲೈನಮಾರ್ಗಗಳಂತೂ ಹೇರಳವಾಗಿವೆ. ಇಂಡಿ, ವಿಜಾಪುರ, ಬಾಗಲಕೋಟಿ, ಮುದ್ದೇಬಿಹಾಳ ಇವು ಮೂರು ನಾಲ್ಕು ಮುಖ್ಯ ಮಾರ್ಗಗಳು ಕೂಡುವ ಸ್ಥಳದಲ್ಲಿವೆ.

ಸದ್ಯಕ್ಕೆ ಬಹುತರವಾಗಿ ಜನರೂ ವ್ಯಾಪಾರದ ಸರಕುಗಳೂ ಉಗಿಬಂಡಿಯಿಂದಲೇ ಒಂದು ಊರಿಂದ ಮತ್ತೊಂದು ಊರಿಗೆ ಹೋಗುವವು. ಉಗಿಬಂಡಿಯು ಬಹು ತ್ವರೆಯಿಂದ ಹೋಗುತ್ತದೆ. ಬಾಡಿಗೆಯೂ ಕಡಿಮೆ. ಇವೆರಡು ಕಾರಣಗಳಿಂದ ವ್ಯಾಪಾರಕ್ಕೆ ಇದರ ಅನುಕೂಲವು ಬಹಳ ಆಗಿದೆ. ಈ ಜಿಲ್ಹೆಯಲ್ಲಿ ಉಗಿಬಂಡಿಯು ಮಾರ್ಗಗಳು ಕಡಿಮೆ. ಸದರ್ನ ಮರಾಠಾ ರೇಲ್ವೆಯ ಒಂದೇ ಒಂದು ಶಾಖೆಯು ಗದಗಿನಿಂದ ಹೊರಟು, ಈ ಜಿಲ್ಹೆಯಲ್ಲಿ ಬಾದಾಮಿ, ಬಾಗಲಕೋಟಿ, ತೆಲಗಿ, ವಿಜಾಪುರ, ಇಂಡಿಗಳ ಮೇಲಿಂದ ಹಾಯ್ದು ಹುಟಗಿಗೆ ಹೋಗಿದೆ. ಕಲಾದಗಿ, ಇಲಕಲ್ಲು ತಾಳೀಕೋಟಿ ಮುಂತಾದ ವ್ಯಾಪಾರದ ಸ್ಥಳಗಳಿರುವದರಿಂದಲೂ ಈ ಜಿಲ್ಹೆಯ ಪಶ್ಚಿಮದಲ್ಲಿ ಮುಧೋಳ, ಜಮಖಂಡಿ ಸಂಸ್ಥಾನಗಳಿದ್ದು, ಅವೂ ವ್ಯಾಪಾರದ ಮುಖ್ಯ ಸ್ಥಳಗಳಾದುದರಿಂದಲೂ ಉಗಿಬಂಡಿಯ ಮಾರ್ಗಗಳಾಗುವದು ಅವಶ್ಯವಿದೆ. ಅದರಂತೆ ಬಾಗಲಕೋಟಿಯಿಂದ ಕುಡಚಿಯ ಕಡೆಗೆ ಒಂದು ,ಹುನಗುಂದ ಇಲಕಲ್ಲುಗಳ ಕಡೆಗೆ ಒಂದು, ಮತ್ತು ವಿಜಾಪುರದಿಂದ ಕುಡಚಿಯು ವರೆಗೆ ಒಂದು, ತಾಳೀಕೋಟಿಯ ಕಡೆಗೆ ಒಂದು, ಮತ್ತು ಆಲಮಟ್ಟಿಯಿಂದ ತಾಳೀಕೋಟಿಯ ಕಡೆಗೆ ಒಂದು, ಹೀಗೆ ಐದಾರು ಕಡೆಗೆ ಉಗಿಬಂಡಿಯ ಉಪಶಾಖೆಗಳನ್ನು ಒಯ್ಯುವ ವಿಚಾರವು ಕೆಲವು ದಿವಸಗಳ

ಹಿಂದೆ ಸರಕಾರದವರ ಮನಸ್ಸಿನಲ್ಲಿ ಇತ್ತು. ಅದರಂತೆ ಆ ಬಗ್ಗೆ ಕೆಲಸ ಸಹ
ನಡೆದಿತ್ತು. ಆದರೆ ಯೂರೋಪದಲ್ಲಿಯ ಮಹಾ ಯುದ್ಧದ ಮೂಲಕ ಅವೆಲ್ಲ
ಕೆಲಸಗಳು ಸದ್ಯಕ್ಕೆ ಬಂದಾಗಿವೆ.

ಈ ಜಿಲ್ಹೆಯಲ್ಲಿ ಹಾಯುವ ಮುಖ್ಯ ಮುಖ್ಯ ಮಾರ್ಗಗಳಲ್ಲಿ ಹತ್ತು ವ
ದೊಡ್ಡ ಊರುಗಳಲ್ಲಿ ಪ್ರಯಾಣಸ್ಥರೂ ಸರಕಾರೀ ಅಧಿಕಾರಸ್ಥರೂ ಇಳಕೊಳ್ಳ
ಲಿಕ್ಕೆ ಇಮಾರತುಗಳಿವೆ. ಬಹುಶಃ ಅಂಥ ಊರುಗಳಲ್ಲಿ ಟಪಾಲ ಆಫೀಸು
ಗಳೂ ಇರುತ್ತವೆ. ಬಾಗಲಕೋಟಿ, ಕಲಾದಗಿ, ಅನಗವಾಡಿ, ಕಮತಿಗಿ, ಹಿಪ್ಪ
ರಗಿ ಮುಂತಾದ ಸ್ಥಳಗಳಲ್ಲಿ ಇಳಕೊಳ್ಳಲಿಕ್ಕೆ ಉತ್ತಮ ಬಂಗಲೆಗಳಿರುತ್ತವೆ.

ಉಗಿಬಂಡಿಯ ಸ್ಟೇಶನುಗಳಲ್ಲಿಯೂ ಇಂಡಿ, ವಿಜಾಪುರ, ಮುದ್ದೇಬಿಹಾಳ,
ಬಾಗಲಕೋಟಿ, ಬಾದಾಮಿ, ಗುಳೇದಗುಡ್ಡ, ತಾಳೀಕೋಟಿ, ಕಲಾದಗಿ ಈ
ಸ್ಥಳಗಳಲ್ಲಿಯೂ ತಂತೀಟಪಾಲಿನ ಆಫೀಸುಗಳು ಇರುತ್ತವೆ.

---

# ೬ನೆಯ ಪ್ರಕರಣ.

## ವ್ಯಾಪಾರ.

ವಿಜಾಪುರ ಜಿಲ್ಹೆಯೊಳಗಿನ ಜನರ ಮುಖ್ಯ ಉದ್ಯೋಗವು ಒಕ್ಕಲತನ ವೆಂದು ಹಿಂದೆ ಹೇಳಿದ್ದೇವೆ. ಇಲಕಲ್ಲು, ಗುಳೇದಗುಡ್ಡ, ಬಾಗಲಕೋಟಿ ಮೊದ ಲಾದ ಸ್ಥಳಗಳಲ್ಲಿ ಸೀರೆ, ಖಣ, ಧೋತರಗಳು ಆಗುತ್ತವೆ. ಈ ಜಿಲ್ಹೆಯಲ್ಲಿ ಅನೇಕ ವ್ಯಾಪಾರಸ್ಥರು ಈ ಬಟ್ಟೆಗಳ ವ್ಯಾಪಾರವನ್ನು ಮಾಡುವರು. ಆದ್ದರಿಂದ ವ್ಯಾಪಾರವು ಮಹತ್ವದ ಉದ್ಯೋಗವೆಂದು ಹೇಳಬಹುದು.

ಈ ಜಿಲ್ಹೆಯಲ್ಲಿ ವ್ಯಾಪಾರವು ಚನ್ನಾಗಿ ನಡೆದಾಗ್ಯೂ ವ್ಯಾಪಾರಸ್ಥರ ಸಂಖ್ಯೆಯು ಮಾತ್ರ, ಒಕ್ಕಲತನದಲ್ಲಿ ತೊಡಗಿದವರಷ್ಟು ಇಲ್ಲ. ಆದರೂ ವ್ಯಾಪಾರದಿಂದ ಈ ಜಿಲ್ಹೆಯ ಸಂಪತ್ತು ಹೆಚ್ಚಾಗಿರುವದರಿಂದ ಇದನ್ನು ಬೇರೆ ಯಾಗಿ ಹೇಳಿದ್ದೇವೆ.

ವ್ಯಾಪಾರವೆಂದರೇನು?—ಒಂದು ಪ್ರಾಂತದವರು ತಮ್ಮಲ್ಲಿ ಹೆಚ್ಚಾಗಿ ಹುಟ್ಟುವ ಕಚ್ಚಾ ಮಾಲನ್ನೂ, ತಮ್ಮಲ್ಲಿ ಸಿದ್ಧವಾಗುವ ಕೈಗಾರಿಕೆಯ ಸರಕು ಗಳನ್ನೂ ಬೇರೆಯವರಿಗೆ ಕೊಟ್ಟು ತಮಗೆ ಅವಶ್ಯವಿದ್ದು ತಮ್ಮಲ್ಲಿ ಹುಟ್ಟದ ಇಲ್ಲವೆ ಸಿದ್ಧವಾಗದ ಸರಕುಗಳನ್ನು ಅವರಿಂದ ತೆಗೆದುಕೊಳ್ಳುವದು ವ್ಯಾಪಾರವು. ತಾವು ಮಾರಿದ ಸರಕಿನ ಬೆಲೆ ಹೆಚ್ಚಾಗಿ, ತರಿಸಿದ ಸರಕಿನ ಬೆಲೆ ಕಡಿಮೆಯಾದರೆ ಕಡಿಮೆ ಬಿದ್ದ ಹಣವನ್ನು ಪ್ರತಿಯಾಗಿ ತೆಗೆದುಕೊಳ್ಳುವದು ಸ್ವಾಭಾವಿಕವಾ ದದ್ದು. ಮನುಷ್ಯರಿಗೆ ಅವಶ್ಯವಾದ ಎಲ್ಲ ಪದಾರ್ಥಗಳು ಒಂದೇ ಕಡೆಗೆ ಹುಟ್ಟು ವದಿಲ್ಲ; ಹಾಗು ಸಿದ್ಧವಾಗುವದಿಲ್ಲ, ಇಲ್ಲವೆ ಕೆಲವುಗಳನ್ನು ಸಿದ್ಧಮಾಡಲಿಕ್ಕೆ ಅನುಕೂಲವೂ ಇರುವದಿಲ್ಲ. ಆದ್ದರಿಂದ ನಮ್ಮಲ್ಲಿ ಬೆಳೆಯುವ ಇಲ್ಲವೆ ಸಿದ್ಧವಾ ಗುವ ಸರಕುಗಳನ್ನು ಅವುಗಳ ಅವಶ್ಯಕತೆ ಇದ್ದವರಿಗೆ ಕಳಿಸಿ, ಅವರಲ್ಲಿ ಹುಟ್ಟುವ ಇಲ್ಲವೆ ಸಿದ್ಧವಾಗುವ ಬೇರೆ ಪದಾರ್ಥಗಳನ್ನು ನಾವು ತರಿಸಿಕೊಳ್ಳುವದು ಇಬ್ಬ ರಿಗೂ ಲಾಭಕರವು.

ಒಂದು ಸೀಮೆಯಲ್ಲಿ ವ್ಯಾಪಾರವು ಹೆಚ್ಚಾಗಿ ನಡೆಯಬೇಕಾದರೆ, ಅದಕ್ಕೆ ಹಲವು ಅನುಕೂಲತೆಗಳು ಇರಬೇಕಾಗುವವು. ಅವು ಯಾವವೆಂದರೆ:—

೧. ದೇಶದಲ್ಲಿ ಹೆಚ್ಚಾಗಿ ಹುಟ್ಟುವ ಕಚ್ಚಾ ಮಾಲಾಗಲಿ, ಸಿದ್ಧವಾಗುವ ಕೈಗಾರಿಕೆಯ ಸರಕುಗಳಾಗಲಿ, ಸುತ್ತಲಿರುವ ದೇಶದವರಿಗೆ ಬೇಕಾಗಿರಬೇಕು.

೨. ದೇಶದಿಂದ ದೇಶಗಳಿಗೆ ಹೋಗಲಿಕ್ಕೆ ಮಾರ್ಗಗಳಿರಬೇಕು.

೩. ಸುತ್ತಲಿರುವ ದೇಶಗಳ ಸರಕುಗಳನ್ನು ಕೊಂಡು, ನಾಲ್ಕೂ ಕಡೆಗೆ ಕಳಿಸುವದಕ್ಕೆ ಅನುಕೂಲವಾದ ಸ್ಥಳದಲ್ಲಿ ಆ ದೇಶವು ಇರತಕ್ಕದ್ದು.

ವಿಜಾಪುರ ಜಿಲ್ಹೆಯೊಳಗೆ ಈ ಅನುಕೂಲತೆಗಳು ಎಷ್ಟರ ಮಟ್ಟಿಗೆ ಇರುವವೆಂಬದನ್ನು ನೋಡುವಾ: —

೧. ಇಲ್ಲಿ ಯಾವ ಕಚ್ಚಾ ಮಾಲು ಹುಟ್ಟುತ್ತವೆ? ಹಾಗು ಎಷ್ಟು ಹುಟ್ಟುತ್ತವೆ? ಎಂಬ ಪ್ರಶ್ನೆಗಳು ಮಹತ್ವದವಿರುತ್ತವೆ. ಎಲ್ಲ ಮನುಷ್ಯರಿಗೆ ಅತ್ಯವಶ್ಯವಾದ ಪದಾರ್ಥಗಳೆಂದರೆ ತಿನ್ನಲಿಕ್ಕೆ ಕಾಳು, ಹೊದ್ದುಕೊಳ್ಳಲಿಕ್ಕೆ ಅರಿವೆ ಅಂಚಡಿಗಳು, ಉಪಯೋಗಿಸಲಿಕ್ಕೆ ಪಾತ್ರೆಗಳು ಬೇಕು ಎಂಬದನ್ನು ಹೇಳುವ ಕಾರಣವಿಲ್ಲ. ಈ ಜಿಲ್ಹೆಯಲ್ಲಿ ಹತ್ತಿ, ಜೋಳ, ಗೋಧಿ, ಸಜ್ಜಿ, ಕಡ್ಲೆ, ಎಣ್ಣೆಯ ಕಾಳುಗಳು ಬೇಕಾದಷ್ಟು ಬೆಳೆಯುತ್ತವೆ. ಈ ಜಿಲ್ಹೆಯ ಜನರಿಗೆ ಹೆಚ್ಚಾದ ಈ ಕಾಳುಗಳನ್ನು ಸುತ್ತಲಿರುವ ದೇಶಗಳಿಗೆ ಕಳಿಸುವದಲ್ಲದೆ ದೂರದೂರದ ದೇಶಗಳಿಗೂ ಕಳಿಸಲಿಕ್ಕೆ ಬರುವಂತಿದೆ. ಜೋಳ, ಸಜ್ಜಿಗಳು ಬಹುತರವಾಗಿ ಈ ದೇಶದಲ್ಲಿಯೇ ಖರ್ಚಾಗುವದುಂಟು. ಆದರೆ ಗೋಧಿ, ಹತ್ತಿ, ಎಣ್ಣೇಕಾಳುಗಳು ಮುಂಬಯಿಗೆ ಹೋಗಿ ಅಲ್ಲಿಂದ ವಿಲಾಯತಿಗೆ ಸಹ ಹೋಗುವವು. ಅಂತೂ ಇಲ್ಲಿ ಆಹಾರಕ್ಕೆ ಬೇಕಾಗುವ ಕಾಳೂ, ಬಟ್ಟೆಗೆ ಬೇಕಾದ ಹತ್ತಿಯೂ ವಿಶೇಷವಾಗಿ ಬೆಳೆಯುತ್ತವೆ. ಈ ಜಿಲ್ಹೆಯಲ್ಲಿ ಇಲಕಲ್ಲಿನಲ್ಲಿ ಹುಟ್ಟುವ ಸೀರೆಗಳೂ, ಗುಳೇದಗುಡ್ಡದ ಖಣಗಳೂ ಪ್ರಸಿದ್ಧ. ಅವು ವ್ಯಾಪಾರಕ್ಕಾಗಿ ದೂರದೂರದವರೆಗೆ ಹೋಗುವದುಂಟು. ಈ ಮೇರೆಗೆ ಈ ಜಿಲ್ಹೆಯ ಸುತ್ತಲಿರುವ ಪ್ರದೇಶಗಳ ಜನರಿಗೆ ಅತ್ಯವಶ್ಯವಾದ ಸರಕುಗಳೇ ಇಲ್ಲಿ ಹೆಚ್ಚಾಗಿ ಹುಟ್ಟುವದರಿಂದ, ಇಲ್ಲಿ ವ್ಯಾಪಾರವು ದೊಡ್ಡ ಪ್ರಮಾಣದಿಂದ ನಡೆಯುತ್ತದೆ.

೨. ನೂರು ವರ್ಷಗಳ ಹಿಂದೆ ವಿಜಾಪುರ ಜಿಲ್ಹೆಯ ವ್ಯಾಪಾರವು ಇಷ್ಟಿರಲಿಲ್ಲ. ಯಾಕಂದರೆ ಆಗ ದೇಶದಲ್ಲಿ ಹೆಚ್ಚಾಗಿ ಬೆಳೆಯುವ ಪದಾರ್ಥಗಳನ್ನು ಸುತ್ತಲಿರುವ ದೇಶಗಳಿಗೆ ಕಳಿಸಲಿಕ್ಕೆ ಒಳ್ಳೇ ಮಾರ್ಗಗಳಿರಲಿಲ್ಲ. ದೂರ ಧೇಶಕ್ಕೆ ಸರಕುಗಳನ್ನು ಕಳಿಸುವದು ಬಹು ಪ್ರಯಾಸವಾಗಿತ್ತು. ಅಷ್ಟು ಸಾಹಸ ಮಾಡಿ ಕಳಿಸಿದರೂ ತಕ್ಕಷ್ಟು ಲಾಭವಾಗುತ್ತಿದ್ದಿಲ್ಲ. ಆದ್ದರಿಂದ ಜನರು ತಮಗೆ ಅವಶ್ಯವಿದ್ದದ್ದಕ್ಕಿಂತ ಹೆಚ್ಚಾದ ಮಾಲನ್ನು ಬೆಳೆಯಿಸುತ್ತಿದ್ದಿಲ್ಲ. ಆದರೆ ಹಿಂದೆ ಹೇಳಿದಂತೆ ಇಂಗ್ಲಿಷರ ಅಮಲು ಪ್ರಾರಂಭವಾದಂದಿನಿಂದ

ಮಾರ್ಗಗಳು ಹೆಚ್ಚಾಗುತ್ತ ನಡೆದವು. ವ್ಯಾಪಾರಕ್ಕೆ ಬಹಳ ಅನುಕೂಲವಾದ ಉಗಿಬಂಡಿಯ ಮಾರ್ಗವು ಆಯಿತು. ಇದರಿಂದ ದೂರದೂರ ದೇಶಗಳ ಸಂಗಡ ಸಹ ವ್ಯಾಪಾರ ಮಾಡಲಿಕ್ಕೆ ಅನುಕೂಲವಾಯಿತು. ಚಕ್ಕಡಿಗಳೂ ಮನುಷ್ಯರೂ ಬೇಕಾದ ಹಾಗೆ ಓಡಾಡಲಿಕ್ಕೆ ಅನುಕೂಲವಾದ ಮಾರ್ಗಗಳು, ಈ ಜಿಲ್ಹೆಯ ಒಳಗೂ ಸುತ್ತಲಿರುವ ಪ್ರದೇಶಗಳಿಗೂ ಮಾಡಲ್ಪಟ್ಟವೆ. ಉಗಿಬಂಡಿಯಿಂದ ಮುಂಬಯಿ, ಪುಣೆ, ಸೊಲ್ಲಾಪುರ, ಧಾರವಾಡ, ಹುಬ್ಬಳ್ಳಿ, ಮೈಸೂರು, ಬೆಂಗಳೂರು ಮುಂತಾದ ಪಟ್ಟಣಗಳಿಗೆ ಸರಕುಗಳನ್ನು ಕಳಿಸುವ ಅನುಕೂಲತೆ ಉಂಟಾಗಿದೆ. ಇದರ ಹೊರತು ಸೊಲ್ಲಾಪುರ ಬೆಳಗಾಂವಿ ಧಾರವಾಡಗಳಿಗೂ, ಜಮಖಂಡಿ ಮುಧೋಳ ಜತ್ತ ರಾಮದುರ್ಗ ಸಂಸ್ಥಾನಗಳಿಗೂ, ನಿಜಾಮನ ರಾಜ್ಯಕ್ಕೂ ಹೋಗಲಿಕ್ಕೆ ಲೈನಮಾರ್ಗಗಳಿವೆ. ಹಾಗು ಜಿಲ್ಹೆಯ ತುಂಬ ಲೈನ ಮಾರ್ಗಗಳು ಜಾಳಿಗೆಯಂತೆ ಹಬ್ಬಿವೆ. ಇದರಿಂದ ವ್ಯಾಪಾರಕ್ಕೆ ಬಹು ಅನುಕೂಲವಾಗಿದೆ. ಉಗಿಬಂಡಿಯ ಮಾರ್ಗವು ಮಾತ್ರ ದಕ್ಷಿಣದಿಂದ ಉತ್ತರಕ್ಕೆ ಒಂದೇ ಹೋಗಿದೆ. ಆ ಮಾರ್ಗಕ್ಕೆ ಈ ಜಿಲ್ಹೆಯಲ್ಲಿ ಶಾಖೆಗಳೇ ಇಲ್ಲ. ಕೆಲವು ದೊಡ್ಡ ಊರುಗಳು ಉಗಿಬಂಡಿಯ ಮಾರ್ಗ ಬಿಟ್ಟು ಬಹು ದೂರದಲ್ಲಿ ಅವೆ. ಎರಡು ಮೂರು ಶಾಖೆಗಳು ಆದಲ್ಲಿ ವ್ಯಾಪಾರವು ಇನ್ನೂ ಬೆಳೆಯುವ ಸಂಭವವದೆ.

೩. ಈ ಜಿಲ್ಹೆಯಲ್ಲಿ ಹುಟ್ಟುವ ಸರಕುಗಳೇ ಬಹುಶಃ ಸುತ್ತಲಿರುವ ಪ್ರದೇಶಗಳಲ್ಲಿ ಹುಟ್ಟುವದರಿಂದ, ಅವುಗಳ ವ್ಯಾಪಾರವು ಇಲ್ಲಿಯೇ ಆಗುವದಿಲ್ಲ. ಆ ಸರಕನ್ನು ದೂರದೂರದ ದೇಶಗಳಿಗೆ ಕಳಿಸಬೇಕಾಗುತ್ತದೆ. ಇಲ್ಲಿ ಹುಟ್ಟುವ ಹತ್ತಿ, ಜೋಳ, ಗೋದಿ, ಎಣ್ಣೇಕಾಳುಗಳು ದೂರದೂರದ ಪ್ರದೇಶಗಳಿಗೆ ಹೋಗುತ್ತವೆ. ವಿಜಾಪುರದಲ್ಲಿ ಒಂದು ಎಣ್ಣೆ ತೆಗೆಯುವ ಕಾರಖಾನೆಯುಂಟು. ಅಲ್ಲಿ ಕುಸಿಬೆ, ನೆಲಗಡ್ಲೆ ಹಾಗು ಅಗಸೆ ಇವುಗಳ ಎಣ್ಣೆ ಸಿದ್ಧವಾಗಿ ಪರ ಜಿಲ್ಹೆಗೆ ಹೋಗುತ್ತದೆ.

ವಿಜಾಪುರದ ಹೊರಗೆ ಕಳಿಸುವ ಸರಕುಗಳನ್ನು ಮಾತ್ರ ಇಲ್ಲಿಯ ವರೆಗೆ ಹೇಳಿದೆವು. ಇನ್ನು ಇಲ್ಲಿ ಬೆಳೆಯದಿರುವ ಹಾಗೂ ಸಿದ್ಧವಾಗದ ಸರಕುಗಳನ್ನು ಈ ಜಿಲ್ಹೆಯವರು ಹೊರಗಿನಿಂದ ತರಿಸಬೇಕಷ್ಟೇ. ಹೊರಗಿನಿಂದ ಬರುವ ಸರಕುಗಳಿಗೆ ಆಮದವೆಂದೂ, ಹೊರಗೆ ಹೋಗುವ ಸರಕುಗಳಿಗೆ ರಫ್ತವೆಂದೂ ಅನ್ನುವದುಂಟು. ಒಂದು ಸೀಮೆಯ ಹುಟ್ಟುವಳಿಯೂ ಕೈಗಾರಿಕೆಯೂ ಗೊತ್ತಿ

ದ್ದರೆ, ಆ ದೇಶದ ಆಮದರಫ್ತಗಳನ್ನು ನಾವು ಹೇಳಬಹುದು. ಈ ಜಿಲ್ಹೆಯ ಹುಟ್ಟುವಳಿ ಕೈಗಾರಿಕೆಗಳ ಬಗ್ಗೆ ಹಿಂದೆ ಹೇಳಿದ್ದೇವೆ. ಇನ್ನು ಇಲ್ಲಿಯ ಆಮದ ರಫ್ತಗಳಲ್ಲಿ ಮುಖ್ಯವಾದವುಗಳನ್ನು ಮಾತ್ರ ಇನ್ನು ಮುಂದೆ ಹೇಳುವೆವು.

ರಫ್ತಾಗುವ ಸರಕುಗಳಲ್ಲಿ ಹತ್ತಿಯು ಎಲ್ಲಕ್ಕೂ ಮಹತ್ವದ್ದು. ಇಲ್ಲಿಯ ಹತ್ತಿಯಲ್ಲಿ ಜವಾರಿ ಹತ್ತಿಯೆಂದೂ, ವಿಲಾಯತಿಯ ಹತ್ತಿಯೆಂದೂ, ಕ್ಯಾಂಬೋಡಿಯಾ ಹತ್ತಿಯೆಂದೂ ಮೂರು ಪ್ರಕಾರಗಳುಂಟು. ಈ ಜಿಲ್ಹೆಯಲ್ಲಿ ನೂಲುವ, ನೇಯುವ ಗಿರಣಿಗಳು ಇಲ್ಲದ್ದರಿಂದ, ಅರಳೆಯೆಲ್ಲ ಮುಂಬಯಿಗೇ ಹೋಗುವದುಂಟು. ಇಲ್ಲಿಯ ನೇಕಾರರು ಮುಂಬಯಿಯಿಂದ ಬಂದ ನೂಲನ್ನೇ ಉಪಯೋಗಿಸುವರು. ಇಲ್ಲಿ ಅರಳೆಯನ್ನು ಕೈಯಿಂದ ಅಲ್ಪಸ್ವಲ್ಪ ನೂಲುವದುಂಟು. ಆ ನೂಲು ಉರುಟು ದೋತರ, ಹಚ್ಚಡ ಮೊದಲಾದವುಗಳಿಗೆ ಉಪಯೋಗವಾಗುತ್ತದೆ.

ಮಗ್ಗದ ಅರಿವೆಗಳಲ್ಲಿ ಇಲಕಲ್ಲ ಸೀರೆಗಳೂ, ಗುಳೇದಗುಡ್ಡದ ಖಣಗಳೂ ಬಹು ದೂರ ಹೋಗುತ್ತವೆ. ಧಾರವಾಡ, ಬೆಳಗಾಂವಿ, ಮುಂಬಯಿ, ಪುಣೆ ಮೊದಲಾದ ಪಟ್ಟಣಗಳಿಗೆ ಹೋಗುವದುಂಟು.

ಕಾಳುಗಳಲ್ಲಿ ಜೋಳ, ಗೋದಿ, ಎಣ್ಣೀಕಾಳು, ಸೆಜ್ಜೆಗಳು ವಿಶೇಷವಾಗಿ ರಫ್ತಾಗುವವು. ಇವುಗಳಲ್ಲಿ ಜೋಳ, ಸೆಜ್ಜೆಗಳು ಬಹುತರ ಒಳದೇಶದಲ್ಲಿಯೇ ಖರ್ಚಾಗುವವು. ಗೋದಿ, ಎಣ್ಣೀಕಾಳುಗಳು ಮಾತ್ರ ಮುಂಬಯಿಗೆ ಹೋಗಿ ಮುಂದೆ ವಿಲಾಯತಿಗೆ ಸಹ ಹೋಗುವವು.

ಆಮದವಾಗುವ ಪದಾರ್ಥಗಳಲ್ಲಿ, ಹಲವು ಹಿಂದುಸ್ತಾನದ ಹೊರಗಿನಿಂದ ಬರುವವೆಂದು ಸಾಮಾನ್ಯವಾಗಿ ಹೇಳಬಹುದು. ನಮ್ಮಲ್ಲಿ ಮುಖ್ಯವಾಗಿ ಧಾನ್ಯ ಹುಟ್ಟುವದು. ಅರಿವೆಗಳಿಗೆ ಅವಶ್ಯವಾದ ಹತ್ತಿ ಹುಟ್ಟಿದರೂ, ನೂಲು ಮಾತ್ರ ಮುಂಬಯಿ, ಸೊಲ್ಲಾಪುರಗಳಿಂದ ಬರುವದು. ಆದ್ದರಿಂದ ಮನುಷ್ಯನಿಗೆ ಬೇಕಾಗುವ ಸಣ್ಣಪುಟ್ಟ ಸರಕುಗಳೆಲ್ಲ ಹೊರಗಿಂದಲೇ, ಈ ಜಿಲ್ಹೆಗೆ ಬರುವದೆಂಬದನ್ನು ಲಕ್ಷ್ಯದಲ್ಲಿಡುವಂತಿದೆ. ಈ ಜಿಲ್ಹೆಯಲ್ಲಿ ಮಧ್ಯಮ ಸ್ಥಿತಿಯಲ್ಲಿರುವ ಜನರ ಮನೆಗೆ ಹೋಗಿ, ಅವರು ಉಪಯೋಗಿಸುವ ಪದಾರ್ಥಗಳನ್ನು ಪರೀಕ್ಷಿಸಿದರೆ, ಅವುಗಳಲ್ಲಿ ಅನೇಕ ಪದಾರ್ಥಗಳು ಹೊರಗಿಂದ ಬರುವವೆಂದು ಮನಗಾಣಬಹುದು. ಇತರ ದೇಶದವರಿಗೆ ಕೈಗಾರಿಕೆಯ ವಿಷಯದಲ್ಲಿ ಇರುವ ಅನುಕೂಲಗಳು ನಮ್ಮ ಜಿಲ್ಹೆಯಲ್ಲಿ ಇಲ್ಲದಿರುವದೇ ಇದಕ್ಕೆ ಕಾರಣವು.

ನಮ್ಮಲ್ಲಿ ಹಳ್ಳಿಯವರಿಗೆ ಸಹ ಅತ್ಯವಶ್ಯವೆನಿಸುವ ಕೆಲವು ಪದಾರ್ಥಗಳು ಪರ ದೇಶಗಳಿಂದಲೇ ಬರುವವು.

ಕಬ್ಬಿಣವೂ, ಕಬ್ಬಿಣದ ಬಹುತರ ಎಲ್ಲ ಬಗೆಯ ಸಾಮಾನುಗಳೂ, ಅತಿ ದೊಡ್ಡ ಕಾರಖಾನೆಯ ಯಂತ್ರಗಳಿಂದ ಸಣ್ಣಸಣ್ಣ ಮೊಳೆಗಳ ವರೆಗೆ ಹಲವು ಬಗೆಯ ಒಡವೆಗಳೂ ವಿಲಾಯತಿಯಿಂದ ಬರುವವು. ಯಂತ್ರದಿಂದ ತಯಾರಾದ ಅರಿವೆಗಳೂ, ನೂಲೂ ವಿಲಾಯತಿಯಿಂದಲೇ ಬರುತ್ತವೆ. ಕೆಲವು ಮುಂಬಯಿ ಯಿಂದಲೂ ಬರುತ್ತವೆ. ಚಿಮಣಿಯೆಣ್ಣೆಯು ರಸಿಯಾದಿಂದಲೂ, ಸಂಯುಕ್ತ ಸಂಸ್ಥಾನ, ಬ್ರಹ್ಮದೇಶಗಳಿಂದಲೂ ಮುಂಬಯಿಯ ಮಾರ್ಗವಾಗಿ ಬರುತ್ತವೆ. ಕಡ್ಡಿಪೆಟ್ಟಿಗೆಗಳು ನಾರ್ವೆ, ಸ್ವೀಡನ್, ಜಪಾನದೇಶಗಳಿಂದಲೂ, ಮುಂಬಯಿ ಯಿಂದಲೂ ಬರುತ್ತವೆ. ಬೆಳ್ಳಿ, ಬಂಗಾರ, ಕಬ್ಬಿಣ, ತಾಮ್ರಗಳು ಪರದೇಶದಿಂದ ಮುಂಬಯಿ ಮಾರ್ಗವಾಗಿಯೇ ಬರುತ್ತವೆ.

ಅರಿವೆಗಳಲ್ಲಿ ಶಾಲುಗಳೂ, ಸೀರೆಗಳೂ ಬೆಂಗಳೂರಿನಿಂದಲೂ, ಪೀತಾಂಬರ ಗಳು ಕಾಶಿ, ಪುಣೆಯಿಂದಲೂ ಬರುತ್ತವೆ. ಹಿತ್ತಾಳಿ ತಾಮ್ರದ ಪಾತ್ರೆಗಳು ನಾಶಿಕ, ಪುಣೆ, ನಾಗಪುರಗಳಿಂದ ಬರುತ್ತವೆ. ಸಕ್ಕರೆ, ಅರಿಸಿಣ, ಮೊದಲಾ ದವುಗಳು ಬೆಂಗಳೂರಿನಿಂದ ಬರುವವಲ್ಲದೆ ಮುಂಬಯಿಯಿಂದಲೂ ಬರುತ್ತವೆ. ಕೊಬ್ಬರಿಯೆಣ್ಣೆ, ಯಾಲಕ್ಕಿ, ತೆಂಗಿನಕಾಯಿ, ಮೆಣಸು, ಅಡಿಕೆಗಳು ಕಾನಡಾ ಜಿಲ್ಹೆಯಿಂದಲೂ, ಮೈಸೂರಪ್ರಾಂತದಿಂದಲೂ ಬರುತ್ತವೆ. ಅಕ್ಕಿಯು ಧಾರವಾಡ, ಬಿಜವಾಡಾ, ಬ್ರಹ್ಮದೇಶಗಳಿಂದ ಬರುತ್ತದೆ.

ಈ ಜಿಲ್ಹೆಯಲ್ಲಿ ವ್ಯಾಪಾರಕ್ಕೆ ಹೆಸರಾದ ಎಂಟು ಊರುಗಳಿವೆ. ಮಧ್ಯ ದಲ್ಲಿ ವಿಜಾಪುರ, ದಕ್ಷಿಣದಲ್ಲಿ ಬಾಗಲಕೋಟಿ ಇವೆರಡು ಪ್ರಸಿದ್ಧ ವ್ಯಾಪಾರದ ಸ್ಥಳಗಳು. ಇವುಗಳ ಹೊರತು ಇಲಕಲ್ಲು, ತಾಳೀಕೋಟಿ, ಆಲಮೇಲ ಇವು ನಿಜಾಮನ ರಾಜ್ಯಕ್ಕೆ ಸಮೀಪವಿದ್ದ ವ್ಯಾಪಾರದ ಸ್ಥಳಗಳಾಗಿವೆ. ಗುಳೇದಗುಡ್ಡ, ಕೆರೂರ, ಕಲಾದಗಿ ಊರುಗಳಲ್ಲಿಯಾದರೂ ವ್ಯಾಪಾರವು ತಕ್ಕಮಟ್ಟಿಗೆ ಚನ್ನಾಗಿ ಆಗುತ್ತದೆ. ಇವು ವ್ಯಾಪಾರದ ಬಗ್ಗೆ ಇಷ್ಟು ಹೆಸರಾದ ಕಾರಣವನ್ನು ವಿವರಿಸುತ್ತೇವೆ.

ವಿಜಾಪುರ.—ಸುತ್ತಲೂ ಬೈಲುಸೀಮೆಯಿದ್ದು, ಬೆಳೆಯು ಚನ್ನಾಗಿ ಬರು ತ್ತದೆ. ಉಗಿಬಂಡಿಯ ಮಾರ್ಗ ಹಾಗು ಲೈನಮಾರ್ಗಗಳಿವೆ. ಸೊಲ್ಲಾಪುರ, ಜತ್ತ, ಅಥಣಿ ಮೊದಲಾದ ಕಡೆಯಿಂದ ಇಲ್ಲಿಗೆ ಲೈನಮಾರ್ಗಗಳಿವೆ. ಈ ಊರಲ್ಲಿ

ಕಾಳು ಹಾಗು ಅರಳಿಯ ವ್ಯಾಪಾರವು ಬಹಳೇ ಆಗುತ್ತದೆ. ಇದು ಜಿಲ್ಹೆಯ ಮುಖ್ಯ ಸ್ಥಳವಾಗಿದೆ.

ಬಾಗಲಕೋಟೆ.— ಸುತ್ತಲಿನ ಪ್ರದೇಶದಲ್ಲಿ ಅಲ್ಪಸ್ವಲ್ಪ ಗುಡ್ಡಗಳಿದ್ದಾಗ್ಯೂ ಬೆಳೆ ಚನ್ನಾಗಿ ಬರುತ್ತದೆ. ಹುನಗುಂದದ ಕಡೆಯಿಂದಲೂ, ಬೆಳಗಾಂವಿಯಿಂದಲೂ ಬರುವ ಲೈನಮಾರ್ಗಗಳಿವೆ; ಉಗಿಬಂಡಿಯ ಮಾರ್ಗವೂ ಉಂಟು. ಕೃಷ್ಣಾ, ಹಾಗು ಘಟಪ್ರಭಾ ನದಿಗಳ ದಂಡೆಯ ಬೆಳೆಯುಳ್ಳ ಪ್ರದೇಶದ ಹುಟ್ಟುವಳಿಯೆಲ್ಲ ಬಹುಶಃ ಈ ಪಟ್ಟಣಕ್ಕೇ ಮಾರಾಟಕ್ಕಾಗಿ ಬರುತ್ತದೆ. ಮುಧೋಳ, ಜಮಖಂಡಿ ಸಂಸ್ಥಾನಗಳಿಗೆ ಹೋಗಲಿಕ್ಕೆ ಲೈನಮಾರ್ಗಗಳಿವೆ.

ಇಲಕಲ್ಲು.— ಇಲ್ಲಿ ಹುಟ್ಟುವ ಸೀರೆಗಳು ಬಹು ಪ್ರಸಿದ್ಧವೆಂದು ಹಿಂದೆ ಹೇಳಿದ್ದೇವೆ. ಇಲ್ಲಿ ಇರುವಷ್ಟು ಸೀರೆಯ ಮಗ್ಗಗಳು ಕರ್ನಾಟಕದಲ್ಲಿ ಎಲ್ಲಿಯೂ ಇಲ್ಲವೆಂದು ಹೇಳಬಹುದು. ಸೀರೆಗಳಿಗೆ ಬೇಕಾಗುವ ನೂಲು, ಬಣ್ಣ, ರೇಶಿಮೆ ಮೊದಲಾದ ಜೀನಸುಗಳ ವ್ಯಾಪಾರವು ಇಲ್ಲಿ ಬಹಳ ನಡೆಯುತ್ತದೆ. ಉಗಿಬಂಡಿಯಿಂದ ಮಾತ್ರ ಈ ಊರು ಬಹಳ ದೂರವಿರುತ್ತದೆ. ಆದರೂ ಮೊಗಲಾಯಿ ಇಲಾಖೆಯು ಸಮೀಪದಲ್ಲಿದ್ದದರಿಂದ, ಅತ್ತಕಡೆಯ ಸರಕುಗಳು ಇಲ್ಲಿ ಬರುತ್ತವೆ.

ತಾಳೀಕೋಟೆ.— ಈ ಊರು ಉಗಿಬಂಡಿಯಿಂದ ಸುಮಾರು ೩೨ ಮೈಲಿನ ಮೇಲೆ ಇದ್ದಾಗ್ಯೂ, ಈ ಊರಿಗೆ ಲೈನಮಾರ್ಗಗಳು ಕೂಡಿವೆ. ನಿಜಾಮನ ರಾಜ್ಯಕ್ಕೆ ಸಮೀಪವಾದದ್ದು. ಕಾಳುಗಳ ವ್ಯಾಪಾರವೂ, ಅರಳೆಯ ವ್ಯಾಪಾರವೂ ಈ ಊರಲ್ಲಿ ಬಹಳ ಆಗುತ್ತದೆ. ದಿನಾಲು ನೂರಾರು ಚಕ್ಕಡಿಗಳು ಉಗಿಬಂಡಿಯ ಸ್ಟೇಶನಕ್ಕೆ ಹೋಗುತ್ತವೆ ಬರುತ್ತವೆ. ಈ ಊರು ಮುದ್ದೇಬಿಹಾಳದಿಂದ ಈಶಾನ್ಯಕ್ಕೆ ೧೫ ಮೈಲಿನ ಮೇಲೆ ಇರುತ್ತದೆ.

ಆಲಮೇಲ.— ಇದು ಸಿಂದಗಿಯ ಉತ್ತರಕ್ಕೆ ಸುಮಾರು ೧೦ ಮೈಲಿನ ಮೇಲೆ ಇರುತ್ತದೆ. ಇಲ್ಲಿಂದ ವಿಜಾಪುರಕ್ಕೆ ಲೈನಮಾರ್ಗವುಂಟು. ನಿಜಾಮನ ರಾಜ್ಯಕ್ಕೆ ಸಮೀಪದಲ್ಲಿದ್ದು, ಅತ್ತಕಡೆಯ ಕಾಳು, ಅರಳೆಗಳು ಇಲ್ಲಿಗೆ ಬರುತ್ತವೆ.

ಗುಳೇದಗುಡ್ಡ.— ಈ ಊರು ಬಾದಾಮಿಯ ಉತ್ತರಕ್ಕೆ ಸುಮಾರು ೧೦ ಮೈಲಿನ ಮೇಲೆ ಇದ್ದು, ಖಣಗಳ ವ್ಯಾಪಾರದ ಬಗ್ಗೆ ಹೆಸರಾಗಿದೆ. ಉಗಿಬಂಡಿಯ ಸ್ಟೇಶನು ಇಲ್ಲಿಂದ ೬ ಮೈಲಿನ ಮೇಲೆ ಇರುವದು. ಬಾದಾಮಿ, ಕೆರೂರಗಳ ಕಡೆಗೆ ಹೋಗುವ ಲೈನಮಾರ್ಗಗಳೂ ಇಲ್ಲಿ ಇರುತ್ತವೆ.

ಕೆರೂರ.— ಈ ಊರು ಬಾದಾಮಿಯ ವಾಯವ್ಯಕ್ಕೆ ೧೨ ಮೈಲಿನ ಮೇಲೆ ಇದ್ದು ಹುಬ್ಬಳ್ಳಿ, ಸೊಲ್ಲಾಪುರಗಳ ಮಾರ್ಗದ ಮೇಲೆ ಇರುವದು. ಇಲ್ಲಿಯೂ ಕಾಳಿನ ವ್ಯಾಪಾರ ಚನ್ನಾಗಿ ಆಗುತ್ತದೆ. ಇಲ್ಲಿಂದ ಸುತ್ತಲೂ ಲೈನಮಾರ್ಗ ಗಳುಂಟು.

ಕಲಾದಗಿ.— ಇದು ಹಿಂದಕ್ಕೆ ಜಿಲ್ಹೆಯ ಮುಖ್ಯ ಸ್ಥಳವಾಗಿತ್ತು. ವಿಜಾಪುರವು ಜಿಲ್ಹೆಯ ಮುಖ್ಯ ಸ್ಥಳವಾದಂದಿನಿಂದ ಇದರ ವ್ಯಾಪಾರವು ಕುಗ್ಗಿತು. ಈಗ ಇಲ್ಲಿ ನಿಪ್ಪಾಣಿಯಿಂದ ಬೆಲ್ಲವು ವಿಶೇಷವಾಗಿ ಬರುತ್ತದೆ. ಜಮುಖಂಡಿ, ಮುಧೋಳ ಸಂಸ್ಥಾನಗಳು ಈ ಊರಿಗೆ ಸಮೀಪವಿರುವದರಿಂದ ಅತ್ತಕಡೆಯ ಸರಕುಗಳು ಇಲ್ಲಿಗೆ ಬರುತ್ತವೆ. ಬೆಳಗಾಂವಿಯಿಂದ ಲೈನಮಾರ್ಗವು ಬಂದದೆ.

ಇವಲ್ಲದೆ ತಾಲೂಕಿನ ಮುಖ್ಯ ಊರುಗಳಲ್ಲಿಯೂ, ಸಣ್ಣದೊಡ್ಡ ಊರುಗಳಲ್ಲಿಯೂ, ವಾರವಾರಕ್ಕೆ ಸಂತೆ ನೆರೆಯುತ್ತದೆ. ಈ ಸಂತೆಗಳಲ್ಲಿ ಸುತ್ತಲಿನ ಊರುಗಳ ಇಲ್ಲವೆ ಹಳ್ಳಿಗಳ ಜನರು ತಮ್ಮ ಸಾಮಾನುಗಳನ್ನು ಮಾರಿ ತಮಗೆ ಬೇಕಾದ ಜೀನಸುಗಳನ್ನು ಒಯ್ಯುವ ರೂಢಿಯದೆ.

ಜಾತ್ರೆಗಳು ನೆರೆದಲ್ಲಿಯೂ ವ್ಯಾಪಾರವಾಗುವದುಂಟು. ಇಲ್ಲಿ ಸಹ ಕೊಳ್ಳುವವರು ಬಹುತರವಾಗಿ ಹಳ್ಳಿಯ ಜನರೇ ಇರುತ್ತಾರೆ. ಆದರೆ ಜಾತ್ರೆಗಳಲ್ಲಿ ಹೇಳತಕ್ಕಷ್ಟು ವ್ಯಾಪಾರವಾಗುವದಿಲ್ಲ. ಈ ಜಿಲ್ಹೆಯಲ್ಲಿ ಬಾದಾಮಿ ತಾಲೂಕಿನಲ್ಲಿ ಬನಶಂಕರಿಯ ಜಾತ್ರೆಯು ಪ್ರಸಿದ್ಧ. ಈ ಜಾತ್ರೆಗೆ ದೂರದೂರದ ಜನರು ಬರುತ್ತಾರೆ.

---

# ೮ನೆಯ ಪ್ರಕರಣ.

## ಜನಸಂಖ್ಯೆ.

ವಿಜಾಪುರ ಜಿಲ್ಹೆಯಲ್ಲಿ ಸನ್ ೧೮೮೧ರಲ್ಲಿ ೬೩೮೪೯೩ ಜನರಿದ್ದರು. ಸನ್ ೧೮೯೧ರಲ್ಲಿ ೭೯೬೩೩೯; ಸನ್ ೧೯೦೧ರಲ್ಲಿ ೭೩೫೦೪೧; ಸನ್ ೧೯೧೧ರಲ್ಲಿ ೮೬೨೯೭೩ ಜನರು ಇದ್ದದ್ದಾಗಿ ಖಾನೇಸುಮಾರಿಯಿಂದ ಗೊತ್ತಾಗಿದೆ. ಅಂದರೆ ೪೦ ವರ್ಷಗಳಲ್ಲಿ ಚೌ. ಮೈಲಿಗೆ ೩೯ ಜನರಂತೆ ಹೆಚ್ಚಾದಂತಾಯಿತು. ಮಳೆಯು ವಾಡಿಕೆಯಂತೆ ಬಿದ್ದು, ಕಾಳುಕಡಿಗಳು ತುಟ್ಟಿಯಾಗದೆ ಇದ್ದರೆ, ಜನರು ಸೌಖ್ಯದಿಂದಿರುವರು. ಜನಸಂಖ್ಯೆಯಾದರೂ ಕ್ರಮೇಣ ಹೆಚ್ಚುತ್ತ ನಡೆಯುವದು. ಜನಸಂಖ್ಯೆಯು ಕಡಿಮೆಯಾಗುವ ಮುಖ್ಯ ಕಾರಣವು ಬರವು. ವಿಜಾಪುರ ಜಿಲ್ಹೆಯ ಮುಖ್ಯ ಉದ್ಯೋಗವು ಕೃಷಿಕರ್ಮವಿರುವದರಿಂದಲೂ, ಇಲ್ಲಿ ಮಳೆಯ ಮಾನವು ಕಡಿಮೆ ಇದ್ದು, ಅದರಲ್ಲಿಯೂ ಹೆಚ್ಚು ಕಡಿಮೆಯಾಗುವದರಿಂದಲೂ, ಬರದ ಅಂಜಿಕೆಯು ಬಹಳ ಇರುವದು.

ಇತ್ತಲಾಗಿ ಪ್ಲೇಗಬೇನೆಯು ಜನಸಂಖ್ಯೆಯನ್ನು ಕಡಿಮೆ ಮಾಡುತ್ತ ನಡೆದಿರುವದು. ಈ ಜಿಲ್ಹೆಯಲ್ಲಿ ಹಳ್ಳಿಗಳ ಸಂಖ್ಯೆಯು ವಿಪರೀತವಾಗಿಯೂ ಪಟ್ಟಣಗಳ ಸಂಖ್ಯೆಯು ತೀರ ಕಡಿಮೆಯಾಗಿಯೂ ಇರುವದು. ಕೃಷಿಕರ್ಮದಿಂದ ಉಪಜೀವನ ಮಾಡುವ ನಾಡಿನಲ್ಲಿ ಹಳ್ಳಿಗಳೇ ಹೆಚ್ಚಿರುವವು. ಜನರು ತಮ್ಮ ಹೊಲದ ನೆರೆಯಲ್ಲಿ ಮನೆಯನ್ನು ಕಟ್ಟಿಕೊಂಡು ಬಾಳುವರು. ಕೈಗಾರಿಕೆಗಳಿದ್ದಲ್ಲಿ ಪಟ್ಟಣಗಳು ಹೆಚ್ಚಿರುವವು. ಈ ಜಿಲ್ಹೆಯಲ್ಲಿ ಕೈಗಾರಿಕೆಗೆ ಹೆಸರಾದ ಪಟ್ಟಣಗಳು ಇಲಕಲ್ಲು, ಗುಳೇದಗುಡ್ಡ, ಬಾಗಲಕೋಟಿ ಮುಂತಾದ ೩-೪ ಮಾತ್ರ ಇರುವವು. ಬೆಳೆಯುಳ್ಳ ಪ್ರದೇಶದ ಮಧ್ಯದಲ್ಲಿರುವ ಪಟ್ಟಣಗಳು ತಕ್ಕಮಟ್ಟಿಗೆ ವ್ಯಾಪಾರದ ಸ್ಥಳಗಳಾಗಿರುವವು. ಇಂಥ ಪಟ್ಟಣಗಳು ಈ ಜಿಲ್ಹೆಯಲ್ಲಿ ಯಾವವೆಂದರೆ—ವಿಜಾಪುರ, ಬಾಗಲಕೋಟಿ, ತಾಳೀಕೋಟಿ, ಕೆರೂರು, ನಿಡಗುಂದಿ. ಮಳೆಯು ಕಡಿಮೆಯಾಗಿ ಕಾಳುಗಳು ತುಟ್ಟಿಯಾದರೆ ಹಳ್ಳಿಯ ಜನರು ಹೋರೆಗಳನ್ನು ಹುಡುಕುತ್ತ ಪಟ್ಟಣಗಳಿಗೆ ಹೋಗುವದುಂಟು. ಕೂಲಿಯು ವರ್ಷದ ವರೆಗೆ ನಿಶ್ಚಯವಾಗಿ ದೊರೆಯುವಂತೆ ಇದ್ದರೆ, ಅವರು ಪಟ್ಟಣದಲ್ಲಿಯೇ ನೆಲೆಗೊಳ್ಳುವರು. ಕೈಗಾರಿಕೆಗಳು ಬೆಳೆದರಂತೂ ಜನರು

ಪಟ್ಟಣವನ್ನೇ ಸೇರುವರು. ಮುಂದೆ ೧೨ನೇ ಪ್ರಕರಣದಲ್ಲಿ ಈ ಜಿಲ್ಹೆಯ ಪ್ರತಿಯೊಂದು ತಾಲೂಕಿನ ಜನಸಂಖ್ಯೆಯನ್ನು ತೋರಿಸಿದೆ.

ಈ ಜಿಲ್ಹೆಯ ಹಳ್ಳಿಗಳಾಗಲಿ, ಪಟ್ಟಣಗಳಾಗಲಿ, ನೋಡಲಿಕ್ಕೆ ಅಷ್ಟು ಚಂದವಾಗಿರುವದಿಲ್ಲ. ಬಹುಶಃ ಎಲ್ಲ ಹಳ್ಳಿಗಳ ಸುತ್ತಲು ಮಣ್ಣಿನ ಗೋಡೆಗಳಾಗಲಿ, ಕೋಟೆಗಳಾಗಲಿ, ಇದ್ದವೆಂದು ತೋರುತ್ತದೆ. ಉತ್ತಮ ಹವೆಯುಳ್ಳ ಗ್ರಾಮಗಳು, ಜನಸಂಖ್ಯೆಯನ್ನು ಹೆಚ್ಚಿಸಲು ಕಾರಣಗಳಾಗುತ್ತವೆ. ಚನ್ನಾಗಿ ಹವೆಯಾಡದಂಥ ಮನೆಗಳನ್ನು ಕಟ್ಟುವದರಿಂದಲೂ, ಕೊಳಚಿನೀರನ್ನು ಕಂಡಕಂಡಲ್ಲಿ ನಿಲ್ಲಗೊಡುವದರಿಂದಲೂ, ರೋಗಗಳು ಉತ್ಪನ್ನವಾಗಿ ಜನರಿಗೆ ಪೀಡೆಯನ್ನು ಕೊಡುವವು. ಇಲ್ಲಿಯ ಹಳ್ಳಿಗಳ ಒಳಭಾಗಗಳನ್ನು ನೋಡಲಿಕ್ಕಾಗುವದಿಲ್ಲ. ಅಷ್ಟು ಕನಿಷ್ಠವಾಗಿರುತ್ತವೆ. ಪೂರ್ವಕಾಲದಲ್ಲಿ ದೇಶದೊಳಗೆ ಸುವ್ಯವಸ್ಥೆ ಶಾಂತತೆಗಳು ಇಲ್ಲದ್ದರಿಂದಲೂ, ಉಂಡುತಿಂದು ಸೌಖ್ಯದಲ್ಲಿದ್ದದ್ದನ್ನು ಕಂಡರೆ ಹೆಚ್ಚು ತೆರಿಗೆಯನ್ನು ಕಟ್ಟುವರೆಂಬ ಅಂಜಿಕೆಯಿಂದಲೂ, ಮನೆಗಳಿಗೆ ದೊಡ್ಡದೊಡ್ಡ ಕಿಡಿಕಿಗಳನ್ನೂ ಬಾಗಿಲುಗಳನ್ನೂ ಹಚ್ಚಿದರೆ ಕಳ್ಳರ ಕಾಟವು ಉಂಟಾದೀತೆಂಬ ಭಯದಿಂದಲೂ, ಶ್ರೀಮಂತರು ಸಹ ಕನಿಷ್ಠ ತರದ ಮನೆಗಳನ್ನು ಕಟ್ಟುತ್ತಿದ್ದರು. ಮತ್ತು ಮನೆಗಳಿಗೆ ಸಣ್ಣ ಬಾಗಿಲುಗಳನ್ನು ಹಚ್ಚುತ್ತಿದ್ದರು. ಮನೆಯೊಳಗೆ ಹವೆಯೂ ಬೆಳಕೂ ಬರಲಿಕ್ಕೆ ಮಾರ್ಗಗಳೆಂದರೆ ಈ ಬಾಗಿಲುಗಳೇ. ಕೆಲಕೆಲವು ಕಡೆಯಲ್ಲಿ ಮಾಳಿಗೆಯಲ್ಲಿ ಬೆಳಕಿಂಡಿಗಳನ್ನು ಬಿಡುತ್ತಿದ್ದರು. ಪೂರ್ವಕಾಲದ ಪಟ್ಟಣದ ಮನೆಗಳು ಸಹ ಇಂಥವೇ ಇರುತ್ತಿದ್ದವು. ಓಣಿಗಳು ಅಂಕಡೊಂಕಾಗಿಯೂ, ಬಹಳ ಹೊಲಸಾಗಿಯೂ ಇರುವವು. ಬಳಿಕೆಯ ನೀರೆಲ್ಲ ದಾರಿಯಲ್ಲೇ ಇಂಗುವದು. ಆದರೆ ಇತ್ತಿತ್ತಲಾಗಿ ಪಟ್ಟಣಗಳು ಸುಧಾರಿಸುತ್ತ ನಡೆದವೆ. ಕಳ್ಳರ ಹಾವಳಿಯು ಕಡಿಮೆಯಾಗಿದೆ. ಜನರ ಮನೆಯನ್ನು ನೋಡಿ, ಸರಕಾರದವರು ತೆರಿಗೆಯನ್ನು ಹೆಚ್ಚಿಸಬಹುದೆಂಬ ಅಂಜಿಕೆಯು ಹಾರಿಹೋಗಿದೆ. ಸರಕಾರದವರು ಜನರಿಗೆ ಕೊಡುವ ಶಿಕ್ಷಣದಿಂದ, ಅವರಿಗೆ ಸ್ವಚ್ಛತೆಯ ಸುಪರಿಣಾಮಗಳು ಗೊತ್ತಾಗುತ್ತ ನಡೆದಿವೆ. ಆದರೂ ಹಳ್ಳಿಗಳಲ್ಲಿ ಮಾತ್ರ ಇನ್ನೂ ಸುಧಾರಣೆಯು ಆಗಿರುವದಿಲ್ಲ.

---

## ೮ನೆಯ ಪ್ರಕರಣ.

### ಜನರು.

ವಿಜಾಪುರ ಜಿಲ್ಹೆಯಲ್ಲಿ ಸನ್ ೧೯೧೧ನೆಯ ಖಾನೇಸುಮಾರಿಯ ಪ್ರಕಾರ ಅನೇಕ ಧರ್ಮಗಳ ಜನರು ವಾಸಿಸುವರು. ಅವರಲ್ಲಿ ಹಿಂದುಗಳು ನೂರಕ್ಕೆ ೮೭·೭ರಂತೆ ಇರುವರು. ಮುಸಲ್ಮಾನರು ೧೦೦ಕ್ಕೆ ೧೧·೭ರಂತೆ ಇರುವರು. ಜೈನರು ಹಾಗು ಕ್ರಿಸ್ತೀ ಜನರ ಸಂಖ್ಯೆಯು ಬಹಳ ಕಡಿಮೆ ಇರುವದು; ಅಂದರೆ ಅವರ ಸಂಖ್ಯೆಯು ಅನುಕ್ರಮವಾಗಿ ೩೭೩೫ ಮತ್ತು ೧೯೯೮ ಇರುವದು. ಇದಲ್ಲದೆ ದೊಡ್ಡ ಪಟ್ಟಣಗಳಲ್ಲಿ ಕೆಲವು ಪಾರ್ಸೀ ಜನರನ್ನು ಕಾಣಬಹುದು.

ಹಿಂದುಜನರಲ್ಲಿ ಹಲವು ಜಾತಿಗಳುಂಟು; ಪ್ರತಿಯೊಂದು ಜಾತಿಯವರು ತಮ್ಮ ಜಾತಿಯು ಪ್ರಾಚೀನವಾದದ್ದೆಂದು ಹೇಳಿಕೊಳ್ಳುತ್ತಾರೆ. ಒಂದೊಂದು ಜಾತಿಯವರಲ್ಲಿ ಮತ್ತೆ ಅನೇಕ ಪಂಥಗಳೂ, ಮತಗಳೂ, ಪಂಗಡಗಳೂ ಉಂಟು; ಅವರವರ ಆಚಾರವಿಚಾರಗಳೂ ಸಾಂಪ್ರದಾಯಗಳೂ ಭಿನ್ನಭಿನ್ನ ವಾಗಿರುವವು.

ಕೆಲವು ಉತ್ತಮಜಾತಿಗಳೆಂತಲೂ, ಕೆಲವು ಕೀಳುಜಾತಿಗಳೆಂತಲೂ, ಕೆಲವು ಅಸ್ಪೃಶ್ಯ (ಮುಟ್ಟಬಾರದ) ಜಾತಿಗಳೆಂತಲೂ ಗೊತ್ತಾಗಿರುತ್ತವೆ.

ಹಿಂದುಜನರಲ್ಲಿ ಮುಖ್ಯವಾಗಿ ಬ್ರಾಹ್ಮಣರು, ಲಿಂಗವಂತರು, ಈ ಎರಡು ಜಾತಿಯ ಜನರು ಇರುವರು; ಇವರಲ್ಲದೆ, ಜೈನರು, ಮರಾಟರು, ಕೋಮಟಿಗರು, ಮಾರವಾಡಿಗಳು, ಪಂಚಾಳರು, ಸಿಂಪಿಗರು, ಕುರುಬರು, ಬೇಡರು ಈ ಮೊದಲಾದ ಹಲವು ಜಾತಿಯ ಜನರು ಇರುವರು. ಇದಲ್ಲದೆ ಕುಂಚೀಕೊರವರು, ಲಮಾಣಿಗಳು, ಒಡ್ಡರು ಮೊದಲಾದ ಕೀಳುಜಾತಿಯವರೂ, ಹೊಲೆಯ, ಮಾದಿಗ ಮೊದಲಾದ ಅಸ್ಪೃಶ್ಯ ಜಾತಿಯವರೂ ಇರುವರು.

ಬ್ರಾಹ್ಮಣರಲ್ಲಿಯೂ ಅನೇಕ ವರ್ಗಗಳುಂಟು. ಇವುಗಳಲ್ಲಿ ದೇಶಸ್ಥ, ಚಿತ್‌ಪಾವನ ಅಥವಾ ಕೊಂಕಣಸ್ಥ, ಹಾಗು ಕರ್ಹಾಡೆ ಎಂಬ ಮೂರು ಮುಖ್ಯ ವರ್ಗಗಳು. ದೇಶಸ್ಥ, ಕೊಂಕಣಸ್ಥ, ಕರ್ಹಾಡೆ ಎಂಬ ಹೆಸರುಗಳು ಅನ್ವರ್ಥಕ ವಾಗಿರುತ್ತವೆ. ಸಹ್ಯಾದ್ರಿಯ ಪಶ್ಚಿಮಕ್ಕೆ ಸಹ್ಯಾದ್ರಿಗೂ ಸಮುದ್ರಕ್ಕೂ ನಡು ವಿರುವ ಕಿರಿ ಅಗಲಾದ ಪಟ್ಟಿಗೆ ಕೊಂಕಣವೆಂಬ ಹೆಸರು; ಮೂಲತಃ ಈ

ಕೊಂಕಣಪ್ರಾಂತದಲ್ಲಿ ಇದ್ದು, ಅಲ್ಲಿಂದ ಉದ್ಯೋಗದ ನಿಮಿತ್ತವಾಗಿ ಬೇರೆಬೇರೆ ಕಡೆಗೆ ಕೊಂಕಣಸ್ಥರು ವಾಸಮಾಡಿಕೊಂಡಿರುವರು. ಸಹ್ಯಾದ್ರಿಯ ಪೂರ್ವಕ್ಕಿರುವ ಪ್ರದೇಶಕ್ಕೆ ದೇಶವೆಂಬ ಹೆಸರು. ಈ ಭಾಗವೇ ಮೂಲಸ್ಥಾನವಾದವರು ದೇಶಸ್ಥರು; ದೇಶಸ್ಥರಲ್ಲಿ ವೈಷ್ಣವರೆಂತಲೂ, ಸ್ಮಾರ್ತರೆಂತಲೂ ಎರಡು ಮತದವರಿರುವರು. ಶಂಕರಾಚಾರ್ಯರ ಅನುಯಾಯಿಗಳು ಸ್ಮಾರ್ತರು. ಮಧ್ವಾಚಾರ್ಯರ ಅನುಯಾಯಿಗಳು ವೈಷ್ಣವರು. ಸ್ಮಾರ್ತರ ಮುಖ್ಯ ದೇವತೆಯು ಶಿವನು. ವೈಷ್ಣವರ ಮುಖ್ಯ ದೇವತೆಯು ವಿಷ್ಣುವು. ಕೊಂಕಣಸ್ಥರೆಲ್ಲ ಶಂಕರಾಚಾರ್ಯರ ಮತಕ್ಕೆ ಸೇರಿರುವರು. ಸಾತಾರಾ ಜಿಲ್ಹೆಯೊಳಗಿನ ಕರ್‍ಹಾಡ ಎಂಬ ಗ್ರಾಮವೇ ಕರ್‍ಹಾಡರ ಮೂಲಸ್ಥಾನವು. ಇವರ ಧರ್ಮಗುರುಗಳು ಶಂಕರಾಚಾರ್ಯರು. ದೇಶಸ್ಥ, ಕೊಂಕಣಸ್ಥ, ಕರ್‍ಹಾಡರಲ್ಲಿ ಅನ್ನವ್ಯವಹಾರವು ನಡೆಯುತ್ತದೆ. ಆದರೆ ಲಗ್ನವ್ಯವಹಾರವು ಮಾತ್ರ ಪ್ರಚಾರದಲ್ಲಿಲ್ಲ.

ದೇಶಸ್ಥರಲ್ಲಿ ವೈಷ್ಣವರೆಂತಲೂ, ಸ್ಮಾರ್ತರೆಂತಲೂ ಭೇದವುಂಟಷ್ಟೇ. ವೈಷ್ಣವರು ಸಾಧಾರಣ ಕಪ್ಪು ಮೈಬಣ್ಣವುಳ್ಳವರೂ, ಚಲುವರೂ, ಕಸುವುಳ್ಳವರೂ, ಒಳ್ಳೇ ಮೈಕಟ್ಟುಳ್ಳವರೂ ಇರುತ್ತಾರೆ. ಇವರು ಶ್ರೀ ಮುದ್ರೆಗಳನ್ನೂ ಉರ್ಧ್ವನಾಮಗಳನ್ನೂ ಧರಿಸುವರು. ಹಣೆಯ ಮೇಲೆ ಅಂಗಾರವನ್ನು ಎಳೆದು ಮಧ್ಯದಲ್ಲಿ ಅಕ್ಷತೆಯ ಬೊಟ್ಟನ್ನು ಹಚ್ಚುವರು. ಇವರು ಆಡುವ ಭಾಷೆಯು ಕನ್ನಡವಿದ್ದು, ಅದರೊಳಗೆ ಮರಾಠಿಯ ಶಬ್ದಗಳು ಕೆಲವು ಕೂಡಿರುತ್ತವೆ. ಇವರು ಆಡುವ ಭಾಷೆಯು ಮೇಲ್ತರದ ಕನ್ನಡವೆಂದೆನಿಸುವದು. ಇವರಲ್ಲಿ ಗೃಹಸ್ಥರೆಂದೂ, ವೈದಿಕರೆಂದೂ ಎರಡು ವರ್ಗಗಳಿರುವವು. ಗೃಹಸ್ಥರು ಸರಕಾರದಲ್ಲಿ ಚಿಕ್ಕದೊಡ್ಡ ಅಧಿಕಾರಗಳನ್ನು ಸಂಪಾದಿಸಿ ಉದ್ಯೋಗಮಾಡುತ್ತಾರೆ. ಕೆಲವರು ವ್ಯಾಪಾರ, ಕೆಲವರು ಚಿನಿವಾರಿಕೆ, ಕೆಲವರು ಬಡ್ಡಿಯ ವ್ಯವಹಾರಗಳನ್ನೂ ಮಾಡುವರು. ಕೆಲವರು ಭೂಮಿಗಳನ್ನೂ ಮಾಡಿಸುತ್ತಾರೆ. ಹೆಂಗಸರು ಮನೆಯ ಕೆಲಸವನ್ನು ಮಾತ್ರ ಮಾಡುವರು. ಗೃಹಸ್ಥರಿಗೆ ಶಾಸ್ತ್ರಪುರಾಣಗಳನ್ನು ಹೇಳುವದು, ವೈದಿಕಕಾರ್ಯಗಳಲ್ಲಿ ನೆರವಾಗುವದು, ಯಾಚನೆಯನ್ನು ಮಾಡುವದು ಇವೇ ವೈದಿಕರ ಮುಖ್ಯ ಹೋರೆಗಳು.

ವೈಷ್ಣವರಲ್ಲಿ ಗೃಹಸ್ಥರು ವಿದ್ಯಾವಂತರಿರುವರು. ಹುಡುಗರು ಇಂಗ್ಲಿಷ ಶಾಲೆಗಳಿಗೆ ಹೋಗುವರು. ಕೆಲವರು ಮುಂದೆ ಹೆಚ್ಚಿನ ವಿದ್ಯಾಲಯಗಳಿಗೆ

ಹೋಗಿ ದೊಡ್ಡದೊಡ್ಡ ಪದವಿಗಳನ್ನು ಪಡೆಯುತ್ತಾರೆ. ಕೆಲವರು ತವ
ಹೆಣ್ಣುಮಕ್ಕಳನ್ನು ೯-೧೦ ವರ್ಷದವರಾಗುವ ವರೆಗೆ ಶಾಲೆಗೆ ಕಳಿಸುತ್ತಾರೆ.

ಸ್ಮಾರ್ತರು ಸಾಧಾರಣವಾಗಿ ಚಲುವರು. ಇವರು ವಿಭೂತಿಯನ್ನೂ
ಹಣೆಯ ಮೇಲೆ ಅಡ್ಡ ಗಂಧವನ್ನೂ ಹಚ್ಚುವರು. ಇವರು ಪ್ರಾಮಾಣಿಕರೂ
ಒಳಿತಾಗಿ ದುಡಿಯುವವರೂ, ಆದರಾತಿಥ್ಯ ಮಾಡುವವರೂ ಇರುತ್ತಾರೆ
ಮನೆಮಾರುಗಳನ್ನು ಸ್ವಚ್ಛವಾಗಿ ಇಡುವರು. ಇವರು ಆಡುವ ಭಾಷೆ ಕನ್ನಡ
ಇವರ ಮಾತಿನಲ್ಲಿಯೂ ಕೆಲವು ಮರಾಠಿ ಶಬ್ದಗಳು ಕೂಡಿರುವವು. ಇ
ರಲ್ಲಿಯೂ ಗೃಹಸ್ಥರು, ವೈದಿಕರು ಎಂಬ ಭೇದಗಳುಂಟು. ಸರಕಾರಿ ನೌಕರಿ
ಚಿನಿವಾರಿಕೆ, ವ್ಯಾಪಾರಗಳನ್ನು ಮಾಡುವರು. ವೈದಿಕರು ಯಾಚನಾವೃತ್ತಿ
ಯಿಂದ ಜೀವಿಸುವರು.

ಇವರ ಕುಲದೇವತೆಗಳು ಶಿವ, ಪಾರ್ವತಿ. ಶಂಕರಾಚಾರ್ಯರು ಇವ
ಧರ್ಮಗುರುಗಳು. ಇವರ ಆಚಾರ ಸಾಂಪ್ರದಾಯಗಳು ವೈಷ್ಣವರ ಆಚಾ
ಸಾಂಪ್ರದಾಯಗಳಂತೆಯೇ ಇರುವವು. ಇವರಾದರೂ ವೈಷ್ಣವರಂತೆಯೆ
ವಿದ್ಯಾವಂತರಿರುವರು. ಹುಡುಗರು ಹೆಚ್ಚಿನ ವಿದ್ಯಾಲಯಗಳಿಗೆ ಹೋಗುವರು

ಕೊಂಕಣಸ್ಥರು.—ಇವರ ಮೈಬಣ್ಣ ಕೆಂಪು. ಮೈಕಟ್ಟು ತೆಳ್ಳಗೆ. ಮುಖ
ಚರ್ಯವು ಉಲ್ಲಾಸವುಳ್ಳದ್ದಿರುತ್ತದೆ. ಅಂತು ಇವರು ಈಚೆಯ ಬ್ರಾಹ್ಮಣರ
ಚಲುವರೆಂದೆನ್ನಿಸಿಕೊಳ್ಳುವರು. ಇವರ ಕಣ್ಣುಗಳು ಬೆಕ್ಕಿನ ಕಣ್ಣುಗಳಂ
ಇದ್ದು ದೊಡ್ಡವಿರುತ್ತವೆ. ಇವರು ಹಣೆಯ ಮೇಲೆ ಒಂದು ಇಲ್ಲವೆ ಎರಡ
ಬೊಟ್ಟುಗಳನ್ನಾಗಲಿ ಅಡ್ಡ ಗಂಧವನ್ನಾಗಲಿ ಹಚ್ಚುವರು. ಶಂಕರಾಚಾ
ರ್ಯರು ಇವರ ಗುರುಗಳು. ಪಾರ್ವತಿ ಪರಮೇಶ್ವರರು ಇವರ ಕುಲದೇವ
ಗಳು. ದತ್ತಾತ್ರೇಯ ವಿಠೋಬಾ ದೇವತೆಗಳನ್ನೂ ಪೂಜಿಸುವರು. ಇವರ
ಮನೆಯಲ್ಲಿ ಮರಾಠಿ ಭಾಷೆಯನ್ನಾಡುವರು. ಈ ಪ್ರಾಂತದಲ್ಲಿ ನೆಲೆಗೊಂಡ
ಕೆಲವು ಮನೆತನದವರು ಕನ್ನಡವನ್ನು ಚನ್ನಾಗಿ ಮಾತಾಡುತ್ತಾರೆ. ಆದರೂ
ಇವರ ಮಾತಿನಲ್ಲಿ ಮರಾಠಿ ಭಾಷೆಯ ಶಬ್ದಗಳು ಸೇರಿರುತ್ತವೆ.

ಇವರಲ್ಲಿಯೂ ಗೃಹಸ್ಥರು, ವೈದಿಕರು ಎಂಬ ಭೇದಗಳುಂಟು. ಗೃಹ
ಸ್ಥರು ಬಹುತರವಾಗಿ ಸರಕಾರಿ ಉದ್ಯೋಗಗಳನ್ನು ಮಾಡಿ ಜೀವಿಸುವರು
ಆದರೆ ಕೆಲವರು ಒಕ್ಕಲತನ, ವ್ಯಾಪಾರ, ಬಡ್ಡಿವ್ಯವಹಾರ ಮುಂತಾದ
ಉದ್ಯೋಗಗಳನ್ನು ಮಾಡುವರು. ವೈದಿಕರು ಯಾಚನೆಯಿಂದ ಜೀವಿಸುವರು

ಇವರು ಮಿತವ್ಯಯಿಗಳೂ, ಬುದ್ಧಿವಂತರೂ, ಉದ್ಯೋಗಪ್ರಿಯರೂ ಇರುವರು. ಮನೆಮಾರುಗಳನ್ನು ಬಹಳ ಸ್ವಚ್ಛವಾಗಿ ಇಡುವರು. ಇವರ ಇತರ ಸಾಂಪ್ರದಾಯಗಳು ದೇಶಸ್ಥರಂತೆಯೇ ಇರುವವು. ತಮ್ಮತಮ್ಮ ಮಕ್ಕಳನ್ನು ಶಾಲೆಗೆ ಕಳಿಸುವರು. ಇವರಿಗೆ ಹೊಸ ಉದ್ಯೋಗಗಳು ಸೇರುತ್ತವೆ.

ಕರ್ಹಾಡಸ್ಥರು.—ಇವರ ಮುಖಚರ್ಯೆ, ಉಡಿಗೆತೊಡಿಗೆ, ಆಚಾರವಿಚಾರ ಗಳೆಲ್ಲ ಬಹುತರ ಕೊಂಕಣಸ್ಥರಂತೆಯೇ ಇರುವವು. ಇವರು ಆಡುವ ಭಾಷೆ ಮರಾಠಿ. ಇವರು ಬುದ್ಧಿವಂತರೂ, ಮಿತವ್ಯಯಿಗಳೂ, ಕೆಲಸಕ್ಕೆ ಮೆಚ್ಚಿ ದವರೂ, ನಿರ್ಮಲರೂ ಇರುತ್ತಾರೆ.

ಲಿಂಗಾಯತರು.—ಇವರಿಗೆ ವೀರಶೈವರೆಂತಲೂ ಹೆಸರುಂಟು. ಇವರು ಕಸುವುಳ್ಳವರೂ ಒಳ್ಳೇ ಮೈಕಟ್ಟಿನವರೂ ಇರುತ್ತಾರೆ. ಆದರೆ ಸಾಮಾನ್ಯ ವಾಗಿ ಚಲುವರಲ್ಲ. ಇವರು ಹಣೆಗೆ ವಿಭೂತಿಯನ್ನು ಹಚ್ಚಿಕೊಳ್ಳುವರು. ಕೊರಳಲ್ಲಿ ಒಂದು ಬೆಳ್ಳಿಯ ಚೌಕದಲ್ಲಿ ಲಿಂಗವನ್ನು ಕಟ್ಟಿಕೊಳ್ಳುವರು. ಇವರು ಬ್ರಾಹ್ಮಣರಷ್ಟು ಚತುರರೂ, ನಿರ್ಮಲರೂ, ವಿದ್ಯಾವಂತರೂ ಅಲ್ಲ ದಿದ್ದರೂ ಸರಳಸ್ವಭಾವದವರೂ, ಆದರಾತಿಥ್ಯ ಮಾಡುವವರೂ ಇರುತ್ತಾರೆ. ಇವರು ಆಡುವ ಭಾಷೆ ಕನ್ನಡ. ಇವರ ಧರ್ಮಭಾಷೆಯು ಕನ್ನಡವಿರು ವದರಿಂದಲೇ ಇವರು ಉಪಯೋಗಿಸುವ ಭಾಷೆಯಲ್ಲಿ ಅಚ್ಚಗನ್ನಡ ಶಬ್ದಗಳು ಹಲವಿರುತ್ತವೆ. ಆದರೆ ಸಂಸ್ಕೃತದ ಸಂಪರ್ಕವಿಲ್ಲದಿರುವದರಿಂದಲೂ, ಇವ ರಲ್ಲಿ ವಿದ್ಯಾವಂತರ ಸಂಖ್ಯೆಯು ಸ್ವಲ್ಪವಿರುವದರಿಂದಲೂ ಇವರ ಭಾಷೆಯು ಮೇಲಾದದ್ದೆಂದು ಎಣಿಸಲ್ಪಡುವದಿಲ್ಲ. ಇವರು ಶಿವನೇ ಮುಖ್ಯ ದೇವರೆಂದು ತಿಳಿದಾಗ್ಯೂ, ವೀರಭದ್ರ, ಮಲ್ಲಿಕಾರ್ಜುನ, ದ್ಯಾಮವ್ವ, ದುರ್ಗವ್ವ, ಹನುಮಂತ ಮುಂತಾದ ದೇವತೆಗಳನ್ನು ಪೂಜಿಸುವರು. ಇವರಲ್ಲಿ ಗೃಹಸ್ಥರೆಂತಲೂ, ಜಂಗಮರೆಂತಲೂ ಎರಡು ಮುಖ್ಯ ಭೇದಗಳುಂಟು. ಇವರಲ್ಲಿ ಒಟ್ಟಿಗೆ ೩೧ ಒಳಭೇದಗಳುಂಟು. ಜಂಗಮರು ಯಾವತ್ತು ಲಿಂಗವಂತ ಜಾತಿಗಳಿಗೆ ವಂದ್ಯ ರೆನ್ನಿಸಿಕೊಳ್ಳುತ್ತಾರೆ. ಜಂಗಮರಲ್ಲಿ ವಿರಕ್ತರೇ ಎಲ್ಲಕ್ಕೂ ಶ್ರೇಷ್ಠರು. ವಿರಕ್ತರು ಲಗ್ನಮಾಡಿಕೊಳ್ಳುವದಿಲ್ಲ. ಹೆಂಗಸರ ಮೋರೆಯನ್ನು ಸಹ ನೋಡುವದಿಲ್ಲ. ಜಡಿ ಬೆಳಿಸುವರು, ಗಡ್ಡ ಬಿಡುವರು, ಮಠದಲ್ಲಿ ವಾಸಿಸುವರು, ಕೌಪೀನವನ್ನು ಧರಿಸುವರು, ಶಾಟಿಯನ್ನು ಹೊರುವರು, ಭಿಕ್ಷೆಯಿಂದ ಜೀವಿಸುವರು. ಇವರ

ಕೊರಳಿನಲ್ಲಿಯೂ ತಲೆಯ ಮೇಲಿನ ಟೊಪ್ಪಿಗೆಗೂ ರುದ್ರಾಕ್ಷಮಾಲೆಗಳಿರುವವ
ಅಯ್ಯನಾಗತಕ್ಕ ಹುಡುಗನಿಗೆ ೮ನೇ ವರ್ಷ ಅಯ್ಯತನವೆಂಬ ಸಂಸ್ಕಾರವನ
ಮಾಡುವರು. ಜಂಗಮರು ಲಗ್ನಮಾಡಿಕೊಂಡು ಮನೆಗಳಲ್ಲಿ ವಾಸಿಸುವರು
ಭಿಕ್ಷೆಯೇ ಇವರ ಉಪಜೀವನದ ಹೋರೆಯು. ಆದರೆ ಕೆಲವರು ಒಕ್ಕಲತ
ವ್ಯಾಪಾರ ಮುಂತಾದ ಹೋರೆಗಳನ್ನು ಮಾಡುತ್ತಾರೆ. ಶೀಲವಂತರ ಸಂಖ್ಯೆಯ
ಬಹು ಸ್ವಲ್ಪವಿರುತ್ತದೆ. ಇವರು ಅಂಗಡಿಯ ವ್ಯಾಪಾರ ಸುನ್ನಗಾರಿ
ಮುಂತಾದ ಹೋರೆಗಳನ್ನು ಮಾಡುವರು. ಪಂಚಮಸಾಲಿಯವರ ಸಂಖ್ಯೆಯ
ಎಲ್ಲಕ್ಕೂ ಹೆಚ್ಚಿರುವದು.

ಮೇಲಿನ ಜಾತಿಯವರು ಕೆಳಗಿನ ಜಾತಿಯವರ ಮನೆಯಲ್ಲಿ ಉಣ್ಣು
ದಿಲ್ಲ. ಇದೇ ಮೇರೆಗೆ ಮೇಲಿನ ಜಾತಿಯವರು ತಮ್ಮ ಹೆಣ್ಣುಮಕ್ಕಳನ್ನು
ಕೆಳಗಿನ ಜಾತಿಯವರಿಗೆ ಕೊಡುವದಿಲ್ಲ.

ಮಠದಲ್ಲಿ ಜಾತಿನಿರ್ಬಂಧವಿಲ್ಲದೆ ಬೇಕಾದ ಜಾತಿಯ ಲಿಂಗವಂತರ
ಒಂದೇ ಪಂಕ್ತಿಯಲ್ಲಿ ಕೂತು ಊಟಮಾಡುವರು. ಆದರೆ ಅಲ್ಲಿ ಜಂಗಮನಿ
ಲಿಕ್ಕೆ ಬೇಕು. ಜಂಗಮನು ಭಿಕ್ಷೆಬೇಡಿ ತಂದ ಅನ್ನವನ್ನು ಹಲವು ಜಾತಿಗ
ಜನರು ಒಂದೇ ಪಂಕ್ತಿಯಲ್ಲಿ ಕೂತು ಉಣ್ಣಬಹುದು. ಹೀಗೆಯೇ ಅರವಟ್ಟಿ
ಯಲ್ಲಿಯೂ ಹೊಲದಲ್ಲಿಯೂ ಜಾತಿನಿರ್ಬಂಧಗಳ ಕಟ್ಟಳೆಯು ಸಡಿಲಾಗುತ್ತದೆ

ಇವರಲ್ಲಿ ಹುಡಿಗೆಯರು ದೊಡ್ಡವರಾಗುವದಕ್ಕಿಂತ ಮೊದಲು ಲಗ್ನಮಾ
ಕೊಡುವರು. ಆದರೆ ವಿಧವೆಯರಿಗೆ ಪುನರ್ವಿವಾಹವುಂಟು.

ಲಿಂಗವಂತರಲ್ಲಿ ಕಲಿತವರ ಸಂಖ್ಯೆಯು ಕಡಿಮೆ. ಇತ್ತಲಾಗಿ ಕೆಲವರು
ತಮ್ಮ ಹುಡುಗರನ್ನು ಇಂಗ್ಲಿಷ ಶಾಲೆಗಳಿಗೂ ಹೆಚ್ಚಿನ ವಿದ್ಯಾಲಯಗಳಿಗೂ
ಕಳಿಸುವರು. ಲಿಂಗವಂತರು ಅನೇಕ ತರದ ಹೋರೆಗಳನ್ನು ಮಾಡುವರು. ಈ
ಹೋರೆಗಳಿಂದ ಇವರಲ್ಲಿ ಕೆಲವು ಜಾತಿಗಳೂ ಉಂಟಾಗಿರುತ್ತವೆ. ಇವರ
ಮುಖ್ಯ ಹೋರೆಯು ವ್ಯಾಪಾರ ಹಾಗು ಒಕ್ಕಲತನ. ಕೆಲವರು ಸರಕಾರ
ನೌಕರಿಯನ್ನು ವಹಿಸಿರುವರು. ಇವರು ತಮ್ಮ ಹೆಣ್ಣುಮಕ್ಕಳನ್ನು ೧೦-೧
ವರ್ಷಗಳ ವರೆಗೆ ಶಾಲೆಗೆ ಕಳಿಸುವದುಂಟು.

ಮುಸಲ್ಮಾನರು.— ಹಿಂದಕ್ಕೆ ವಿಜಾಪುರದಲ್ಲಿ ಆದಿಲ್‌ಶಾಹೀ ರಾಜವಂಶವ
ಆಳಿಹೋದ ಕಾರಣ ಜಿಲ್ಹೆಯಲ್ಲಿ ಅಲ್ಲಲ್ಲಿಗೆ ಎಷ್ಟೋ ಪಠಾಣರ ಹಾಗು ತುರ್ಕರ
ಮನೆತನಗಳು ಇರಬಹುದು. ಆದರೆ ಬಹುತರವಾಗಿ ಎಲ್ಲ ಕಡೆಗೆ ವಾಸಿಸುವ

ಮುಸಲ್ಮಾನರು ಮುಸಲ್ಮಾನೀ ಧರ್ಮವನ್ನು ಸ್ವೀಕರಿಸಿದ ಹಿಂದುಜನರೇ ಆಗಿರುವರು. ಈ ಧರ್ಮದಲ್ಲಿ ಸುನೀ ಮತ್ತು ಶಿಯಾ ಎಂಬೆರಡು ಮುಖ್ಯ ಪಂಥಗಳಿರುತ್ತವೆ. ಇಲ್ಲಿ ಸುನೀ ಪಂಥದವರೇ ಬಹುತರವಾಗಿ ಯಾವತ್ತು ಜನರಿದ್ದಾಗ್ಯೂ ಕಡಿಮೆ ಪ್ರತಿಯ ಮುಸಲ್ಮಾನರಿಗೆ ಈ ಪಂಥಗಳು ಸಹ ಗೊತ್ತಿಲ್ಲವೆಂದು ಹೇಳಬಹುದು. ಕೆಲವರು ಹಿಂದುದೇವತೆಗಳನ್ನು ಪೂಜಿಸುವರು; ಹಿಂದು ಹಬ್ಬಗಳನ್ನು ಮಾಡುವರು; ಹಿಂದು ನಡಾವಳಿಯಂತೆ ನಡೆಯುವರು.

ಹಳ್ಳಿಯ ಮುಸಲ್ಮಾನರು ಎತ್ತರವಾಗಿಯೂ ಧಷ್ಟಪುಷ್ಟರಾಗಿಯೂ ಇರುತ್ತಾರೆ. ಆದರೆ ದೊಡ್ಡ ಗ್ರಾಮಗಳಲ್ಲಿ ಸೌಖ್ಯದಿಂದ ಬೆಳೆದವರ ಮೈಬಣ್ಣ ಕೆಂಪು, ಕಣ್ಣು ದೊಡ್ಡವು. ಯಾವತ್ತು ಮುಸಲ್ಮಾನರು ತಲೆಯನ್ನು ಪೂರ್ಣವಾಗಿ ಬೋಳಿಸಿಕೊಂಡು ಬಹುತರವಾಗಿ ಗಡ್ಡಬಿಡುವರು. ಬಹು ಜನರು ಇಜಾರನ್ನೂ, ಉದ್ದಂಗಿಯನ್ನೂ ಹಾಕುವರು. ಕೆಲವರು ತಲೆಗೆ ಸಣ್ಣ ಟೊಪ್ಪಿಗೆಯನ್ನೂ ಹಾಕುವರು. ಉತ್ತಮ ಕುಲದ ಹೆಂಗಸರು ಪರರ ದೃಷ್ಟಿಗೆ ಬೀಳುವದಿಲ್ಲ. ಅವರು ಬಹುತರ ಮನೆಬಿಟ್ಟು ಹೋಗುವದಿಲ್ಲ. ಅವಶ್ಯಬಿದ್ದರೆ ಬಿಳೇ ಹಚ್ಚಡದ ಬುರಿಕೆ ಹಾಕಿಕೊಂಡು ಹೋಗುವರು.

ಮುಸಲ್ಮಾನರ ಭಾಷೆ ಹಿಂದುಸ್ತಾನಿ. ಆದರೆ ಕಡಿಮೆ ಜಾತಿಗಳ ಮಾತಿನಲ್ಲಿ ಕನ್ನಡ ಮರಾಠಿ ಶಬ್ದಗಳು ಬಹಳ ಸೇರಿರುತ್ತವೆ. ಹಳ್ಳಿಗಳೊಳಗಿನ ಮುಸಲ್ಮಾನರು ಅಚ್ಚ ಕನ್ನಡಿಗರೇ ಇರುತ್ತಾರೆಂದು ಹೇಳಬಹುದು.

ಹಳ್ಳಿಗಳೊಳಗಿನ ಮುಸಲ್ಮಾನರಿಗೆ ಅಲ್ಪಸ್ವಲ್ಪ ಭೂಮಿ ಇರುತ್ತವೆ. ಅವರು ವಾಡಿಕೆಯಾಗಿ ಒಕ್ಕಲತನ ಮಾಡುವರು. ಮಿಕ್ಕವರು ಅತ್ಯುತ್ತಮವಾದ ಹೋರೆಯನ್ನುಹಿಡಿದು ಅತಿ ನೀಚಾದ ಹೋರೆಯವರೆಗೆ ಯಾವತ್ತು ತರದ ಹೋರೆಗಳನ್ನು ಮಾಡುವರು. ನೌಕರಿಯ ಹೋರೆಯನ್ನು ಮಾಡುವವರೇ ಬಹಳ. ಇವರಲ್ಲಿ ಅನೇಕರಿಗೆ ಹೋರೆಯಿಂದ ಹೆಸರು ಬಂದದೆ. ಅತ್ತಾರರು, ಮಣಿಗಾರರು, ಕಲಾಯಿಗಾರರು, ನಾಲಬಂದರು, ಹಕೀಮರು, ಇವರೆಲ್ಲ ಮುಸಲ್ಮಾನ ಜಾತಿಯವರೇ.

ಆಲಸ್ಯವು ಊರೊಳಗಿರುವ ಕಡಿಮೆ ಪ್ರತಿಯ ಮುಸಲ್ಮಾನರ ಮುಖ್ಯ ಗುಣವೆಂದು ಹೇಳಬಹುದು. ಕಡಿಮೆ ಪ್ರತಿಯುವರು ಜಗಳಗಂಟರೂ ತುಂಟರೂ ಇರುತ್ತಾರೆ. ಇವರಲ್ಲಿ ಸ್ವಚ್ಛತೆಯು ತೀರ ಕಡಿಮೆ. ಇವರಲ್ಲಿ ಬಹು ಜನರಿಗೆ ಸರಾಯಿ ಕುಡಿಯುವ ಚಟ ಬಹಳ ಇರುತ್ತದೆ. ಸುಶಿಕ್ಷಿತರೂ, ವತನದಾರರೂ,

ವ್ಯಾಪಾರಸ್ಥರೂ ಹೊರತಾಗಿ ಮಿಕ್ಕಾದವರೆಲ್ಲರೂ ಸೋಮಾರಿತನ, ಸರಾಯಿ
ಕುಡಿಯೋಣ ಈ ಎರಡು ಕಾರಣಗಳಿಂದ ಬಡತನದ ಸ್ಥಿತಿಯಲ್ಲಿದ್ದಾರೆ. ಹಳ್ಳಿ
ಯೊಳಗೆ ಹೊಲಗೆಲಸದಿಂದ ಬಾಳುವವರು ಉದ್ಯೋಗಿಗಳೂ ಮಿತವ್ಯಯಿ
ಗಳೂ ಇರುತ್ತಾರೆ.

ಮುಸಲ್ಮಾನರಲ್ಲಿ ಹಲವರು ವಿದ್ಯೆ ಕಲಿಯುವದಿಲ್ಲ. ಇತ್ತಿತ್ತಲಾಗಿ ಇವರು
ತಮ್ಮ ಹುಡುಗರನ್ನು ಶಾಲೆಗೆ ಕಳಿಸುತ್ತಾರೆ. ಒಳ್ಳೇ ಸ್ಥಿತಿಯಲ್ಲಿರುವವರು ತಮ್ಮ
ಹುಡುಗರನ್ನು ಇಂಗ್ಲಿಷ ಶಾಲೆಗೆ ಕಳಿಸುತ್ತಾರೆ.

---

## ೧೦ನೆಯ ಪ್ರಕರಣ.



### ಸರಕಾರ.

ಜನರನ್ನು ಕ್ಷೇಮದಿಂದಲೂ ಸುಖದಿಂದಲೂ ಇಡುವದು ಸರಕಾರದವರ ಕರ್ತವ್ಯವಿರುವದು. ಪ್ರಾಚೀನ ಕಾಲದಲ್ಲಿ ಈ ಜಿಲ್ಹೆಯಲ್ಲಿ ಅನೇಕ ರಾಜ್ಯಗಳಾಗಿ ಹೋದವು. ಅದಿಲ್‌ಶಾಹೀ ರಾಜವಂಶದವರು ವಿಜಾಪುರದಲ್ಲಿ ಆಳುತ್ತಿರುವಾಗ ಈ ಜಿಲ್ಹೆಯ ವೈಭವವು ಬೆಳೆದಿತ್ತು. ಇದು ಸುಖಸಂಪತ್ತುಗಳಿಂದ ಸಮೃದ್ಧವಾಗಿತ್ತು. ಆದಾಗ್ಯು ಕೃಷ್ಣಾ ತುಂಗಭದ್ರಾ ಈ ಹೊಳೆಗಳ ನಡುವಿನ ಪ್ರದೇಶವು ಯಾವಾಗಲು ರಣರಂಗವಾಗಿರುತ್ತಿತ್ತು. ಪ್ರಜೆಗಳಿಗೆ ಸುಖಶಾಂತಿಗಳು ಲಭಿಸುತ್ತಿದ್ದಿಲ್ಲ. ಇತ್ತಿತ್ತಲಾಗಿ ಇಂಗ್ಲಿಷ ಸರಕಾರದವರ ಅಮಲು ಉಂಟಾದಂದಿನಿಂದ, ಜನರು ಕ್ರಮೇಣ ಉದ್ಯೋಗಿಗಳೂ ಸುಖಿಗಳೂ ಆಗುತ್ತ ನಡೆದಿರುವರು.

ಸುಧಾರಿಸಿದ ಸರಕಾರವು ಜನರ ಹಿತದ ಬಗ್ಗೆ ಕೆಲವು ಮುಖ್ಯ ಕೆಲಸಗಳನ್ನು ಮಾಡತಕ್ಕದ್ದಿರುತ್ತದೆ. ಅವು ಯಾವವೆಂದರೆ—ದೇಶದಲ್ಲಿ ಶಾಂತತೆಯನ್ನು ನೆಲೆಗೊಳಿಸುವದು; ಜನರಿಗೆ ನ್ಯಾಯವನ್ನು ಕೊಡುವದು; ದೇಶದಲ್ಲಿ ವ್ಯಾಪಾರ ಕಲಾಕೌಶಲ್ಯ ಉದ್ಯೋಗಗಳು ಹೆಚ್ಚಾಗಲಿಕ್ಕೆ ಅನುಕೂಲತೆಗಳನ್ನು ಮಾಡಿಕೊಡುವದು; ಜನರ ಬುದ್ಧಿಯನ್ನೂ ಜ್ಞಾನವನ್ನೂ ಬೆಳೆಯಿಸುವದು; ಅವರ ಆರೋಗ್ಯವನ್ನು ಕಾಯುವದು; ಹಾಗು ಅವರಿಗೆ ಸ್ವಂತವಾಗಿ ತಮ್ಮ ಕೊರತೆಗಳನ್ನು ದೂರ ಮಾಡಿಕೊಂಡು ತಮ್ಮ ಹಣದ ವ್ಯವಸ್ಥೆಯನ್ನು ಯೋಗ್ಯವಾಗಿ ಮಾಡಿಕೊಳ್ಳಲಿಕ್ಕೆ ಕಲಿಸುವದು. ಇವೆಲ್ಲ ಸರಕಾರದ ಕರ್ತವ್ಯಗಳೆಂದು ಹೇಳಬಹುದು. ಈ ಜಿಲ್ಹೆಯಲ್ಲಿ ಇಂಗ್ಲಿಷ ಸರಕಾರದವರು ಇವೆಲ್ಲ ಕಾರ್ಯಗಳನ್ನು ಜರಗಿಸುವದಕ್ಕೆ ಮಾಡಿರುವ ವ್ಯವಸ್ಥೆಯನ್ನು ತಿಳಿದುಕೊಳ್ಳುವಾ.

ಇನ್ನು ಸರಕಾರವು ಇಷ್ಟು ಕೆಲಸಗಳನ್ನು ಮಾಡಲಿಕ್ಕೆ ಅಧಿಕಾರಸ್ಥರನ್ನು ನೇಮಿಸಬೇಕಷ್ಟೇ. ಆ ಅಧಿಕಾರಿಗಳಿಗೆ ಸಂಬಳ ಕೊಡಬೇಕಷ್ಟೇ. ಇದಕ್ಕಾಗಿ ಸರಕಾರಕ್ಕೆ ಹಣದ ಅವಶ್ಯಕತೆಯುಂಟಾಗುತ್ತದೆ. ಅದನ್ನು ಸರಕಾರವು ಜನರಿಂದ ಕರದ ರೂಪದಿಂದ ತೆಗೆದುಕೊಳ್ಳುವದು. ಈ ಮೇರೆಗೆ ಹಣವನ್ನು

ವಸೂಲುಮಾಡುವ ಕೆಲಸವು ಸರಕಾರದ ಅತಿ ಮಹತ್ವದ ಕೆಲಸವೆನ್ನಬಹುದು. ಯಾಕಂದರೆ ಈ ಹಣವೇ ಇಲ್ಲದಿದ್ದರೆ, ಸರಕಾರದವರು ಮಾಡತಕ್ಕ ಅತಿ ಮಹತ್ವದ ಕೆಲಸಗಳು ಸಾಗಲಾರವು.

ತೆರಿಗೆಯನ್ನು ವಸೂಲುಮಾಡುವ ಕೆಲಸವನ್ನು ಹಳ್ಳಿಗಳಲ್ಲಿ ಗ್ರಾಮಸ್ಥರು (ಗೌಡ ಶಾನಭೋಗರು) ಮಾಡಿ ತಮ್ಮ ತಾಲೂಕಿನ ಮಾಮಲೇದಾರರ ಕಡೆಗೆ ಕಳಿಸುವರು; ಮಾಮಲೇದಾರರು ಜಿಲ್ಹೆಯ ಕಲೆಕ್ಟರನ ಕಡೆಗೆ ಕಳಿಸುವರು. ಆ ಬಳಿಕ ಅವನು ಸರಕಾರದ ನಿಯಮಗಳಿಗೂ ಕಾಯಿದೆಗಳಿಗೂ ಅನುಸಾರವಾಗಿ ಹಣವನ್ನು ವೆಚ್ಚಮಾಡುವನು. ಇದಲ್ಲದೆ ಅವನು ಜನರ ಹಿತಾಹಿತಗಳನ್ನೂ ಹಕ್ಕು ಮುಂತಾದವುಗಳನ್ನೂ ಕಣ್ಮುಟ್ಟ ನೋಡಿ, ಕಿವಿಮುಟ್ಟ ಕೇಳಿ, ಆವಶ್ಯಕವಾದ ಸುಧಾರಣೆಗಳನ್ನು ಮಾಡುವನು. ಹಾಗು ಅವನು ಜಿಲ್ಹೆಯ ಮುಖ್ಯ ಮ್ಯಾಜಿಸ್ಟ್ರೇಟನಿರುತ್ತಾನೆ. ಮ್ಯಾಜಿಸ್ಟ್ರೇಟರು ತಪ್ಪುಗಾರರ ತಪ್ಪಿನ ಬಗ್ಗೆ ವಿಚಾರಮಾಡಿ ಶಿಕ್ಷೆಯನ್ನು ಕೊಡುವರು. ಇವರಲ್ಲಿ ೧ನೇ ವರ್ಗ, ೨ನೇ ವರ್ಗ, ೩ನೇ ವರ್ಗ ಎಂದು ಮೂರು ದರ್ಜೆಗಳು ಇರುವವು. ಕಲೆಕ್ಟರನು ಜಿಲ್ಹೆಯೊಳಗಿನ ಎಲ್ಲ ದರ್ಜೆಯ ಮ್ಯಾಜಿಸ್ಟ್ರೇಟರಿಗೆ ಮುಖ್ಯಸ್ಥನಾಗಿರುತ್ತಾನೆ. ಪೋಲೀಸರು ತಪ್ಪುಗಾರರನ್ನು ಹಿಡಿದು ಮ್ಯಾಜಿಸ್ಟ್ರೇಟರ ಬಳಿಗೆ ತರುವರು; ಮತ್ತು ತಪ್ಪುಗಳು (ಗುನ್ಹೆಗಳು) ಆಗದಂತೆ ಎಚ್ಚರಪಡುವರು. ಪೋಲೀಸ ಖಾತೆಯು ಬೇರೆ ಇದ್ದಾಗ್ಯೂ ಪೋಲೀಸ ಅಧಿಕಾರಿಗಳ ಮೇಲೆ ಕಲೆಕ್ಟರನ ಅಮಲು ನಡೆಯುತ್ತದೆ. ಜಿಲ್ಹೆಯೊಳಗಿನ ಕೆಲವು ಪ್ರಮುಖ ಜನರು ಸಭೆಗೂಡಿ ಲೋಕಲ್‌ಫಂಡಿನ ಹಣದಿಂದ ಲೋಕೋಪಯುಕ್ತವಾದ ಕೆಲಸಗಳನ್ನು ಮಾಡುವರು; ಈ ಸಭೆಗೆ ಡಿಸ್ಟ್ರಿಕ್ಟ ಲೋಕಲ್‌ಬೋರ್ಡ ಅನ್ನುವರು. ಇದೇ ಪ್ರಕಾರ ದೊಡ್ಡದೊಡ್ಡ ಪಟ್ಟಣದ ನಿವಾಸಿಗಳು ತಮ್ಮೊಳಗಿನ ಕೆಲವು ಪ್ರಮುಖರನ್ನು ಆರಿಸಿ ಅವರದೊಂದು ಸಭೆ ಮಾಡುವರು. ಈ ಸಭೆಯವರು ಬಗೆಬಗೆಯ ಕರಗಳನ್ನು ಕಟ್ಟಿ ಪಟ್ಟಣದ ಸುಧಾರಣೆಯನ್ನು ಮಾಡುವರು. ಈ ಸಭೆಗೆ ಮ್ಯುನಿಸಿಪಾಲಿಟಿಯೆಂಬ ಹೆಸರು. ಜಿಲ್ಹೆಯ ಕಲೆಕ್ಟರನು ಈ ಲೋಕಲ್‌ಬೋರ್ಡ ಸಭೆಗೂ ಮ್ಯುನಿಸಿಪಾಲಿಟಿ ಸಭೆಗೂ ಅಧ್ಯಕ್ಷನಾಗಿರುತ್ತಾನೆ. ಇತ್ತಿತ್ತಲಾಗಿ ಕೆಲಕೆಲವು ಮ್ಯುನಿಸಿಪಾಲಿಟಿಗಳಿಗೆ ತಮ್ಮೊಳಗಿನವನೊಬ್ಬನನ್ನು ಅಧ್ಯಕ್ಷನನ್ನಾಗಿ ಆರಿಸಿಕೊಳ್ಳುವ ಹಕ್ಕು ಕೊಡಲ್ಪಟ್ಟಿರುವದು. ಇವೆಲ್ಲ ಖಾತೆಗಳು ಹಿಂದೆ ಹೇಳಿದಂತೆ ಸರಕಾರದ ಕರ್ತವ್ಯಗಳನ್ನು ಜರಗಿಸುವ ಬೇರೆಬೇರೆ ಅಂಗಗಳಾಗಿರುವವು.

ಕಲೆಕ್ಟರನಿಗೆ ಅವೆಲ್ಲವುಗಳ ಸಂಬಂಧವು ಅಲ್ಪಸ್ವಲ್ಪ ಇದ್ದೇ ಇರುವದು. ಇಷ್ಟು ಜವಾಬುದಾರಿಯುಳ್ಳ ಅಧಿಕಾರಸ್ಥನಿಗೆ ದೊಡ್ಡ ಸಂಬಳವೂ ಅಧಿಕಾರವೂ ಇರಬೇಕೆಂಬದನ್ನು ಹೇಳಲವಶ್ಯವಿರುವದಿಲ್ಲ. ಕಲೆಕ್ಟರನು ಬಹುತರವಾಗಿ ಯುರೋಪಿಯನ್ನನಿರುವನು. ಇವನಿಗೆ ತಿಂಗಳಿಗೆ ೨೦೦೦-೨೫೦೦ ರೂಪಾಯಿ ಸಂಬಳವಿರುವದು. (ಶಿಕ್ಷಕರು ವಿದ್ಯಾರ್ಥಿಗಳಿಗೆ ಸದ್ಯದ ಕಲೆಕ್ಟರನ ಚಿತ್ರವನ್ನು ತೋರಿಸಿ ಅವನು ಸಾಲೆಗೆ ಬಂದಾಗಿನ ನೆನಪನ್ನು ಕೊಡಬೇಕು.)

ಕಲೆಕ್ಟರನ ಕೈಕೆಳಗೆ ಇಬ್ಬರಾಗಲಿ ಮೂವ್ವರಾಗಲಿ ಸನದೀ ಯುರೋಪಿಯನ್ ಅಸಿಸ್ಟಂಟ ಕಲೆಕ್ಟರರೂ, ಡಿಸ್ಟ್ರಿಕ್ಟ ಡೆಪ್ಯುಟಿ, ಹುಜೂರ ಡೆಪ್ಯುಟಿ ಎಂಬ ಇಬ್ಬರು ದೇಶೀಯ ಅಧಿಕಾರಸ್ಥರೂ ಇರುವರು. ಮೊದಲಿನ ಎರಡು ತರದ ಅಧಿಕಾರಸ್ಥರಿಗೆ ಮೂರು ನಾಲ್ಕು ತಾಲೂಕುಗಳ ಮೇಲ್ವಿಚಾರಣೆಯು ಒಪ್ಪಿಸಲ್ಪಟ್ಟಿರುತ್ತದೆ. ಇವರು ವರ್ಷದಲ್ಲಿ ಏಳು ತಿಂಗಳುಗಳ ವರೆಗೆ ಫಿರತೀ ಮಾಡಬೇಕು. ಮುಲಕೀ ಕೆಲಸವು ಯೋಗ್ಯರೀತಿಯಿಂದ ನಡೆದಿರುವದೆಂಬದನ್ನು ಪ್ರತ್ಯಕ್ಷವಾಗಿ ನೋಡಬೇಕು. ಇದೇ ಮೇರೆಗೆ ಕಲೆಕ್ಟರನು ಸಹ, ವರ್ಷದಲ್ಲಿ ನಾಲ್ಕು ತಿಂಗಳುಗಳ ವರೆಗೆ ತನ್ನ ಜಿಲ್ಹೆಯಲ್ಲಿ ತಿರುಗಬೇಕು. ಈ ಏರ್ಪಾಡಿನಿಂದ ಹಳ್ಳಿಯ ಜನರಿಗೆ, ಸರಕಾರದ ವರಿಷ್ಠ ಅಧಿಕಾರಿಗಳ ಭೆಟ್ಟಿಯು ಸುಲಭವಾಗಿ ಆಗುವದು. ಸರಕಾರಕ್ಕೂ ಜನರ ಕೋರಿಕೆಗಳು ಚನ್ನಾಗಿ ತಿಳಿಯುವವು. ಇವರು ತಮ್ಮ ಕೈಕೆಳಗಿನ ತಾಲೂಕುಗಳ ಮುಲಕೀಖಾತೆಯ ಮೇಲ್ವಿಚಾರಣೆಯನ್ನು ಮಾಡುವದಲ್ಲದೆ ೧ನೇ ೨ನೇ ವರ್ಗದ ಮ್ಯಾಜಿಸ್ಟ್ರೇಟರಾಗಿ ಫೌಜದಾರಿ ಅಪರಾಧಿಗಳ ವಿಚಾರಣೆಯನ್ನು ಮಾಡುತ್ತಾರೆ. ಹುಜೂರ ಡೆಪ್ಯುಟಿ ಕಲೆಕ್ಟರನು ಜಿಲ್ಹೆಯ ನಗದ ಜಮ, ಖರ್ಚು, ಶಿಲುಕು ಇವುಗಳ ಬಗ್ಗೆ ಜವಾಬುದಾರನಿರುವನಲ್ಲದೆ ೧ನೇ ವರ್ಗದ ಮ್ಯಾಜಿಸ್ಟ್ರೇಟನಾಗಿ ಫೌಜದಾರೀ ಗುನ್ಹೆಗಳ ಚೌಕಸಿಯನ್ನು ಮಾಡುತ್ತಾನೆ.

ಕಾರಭಾರದ ಅನುಕೂಲತೆಗಾಗಿ ಈ ಜಿಲ್ಹೆಯಲ್ಲಿ ೮ ತಾಲೂಕುಗಳನ್ನು ಮಾಡಿರುತ್ತಾರೆ. ತಾಲೂಕಿನ ಮುಖ್ಯಾಧಿಕಾರಿಯು ಮಾಮಲೇದಾರನು. ಮಾಮಲೇದಾರರು ತಮ್ಮ ತಾಲೂಕಿನ ಖಜಾನೆಯ ಕೆಲಸದ ಬಗ್ಗೆ ಜವಾಬುದಾರರಿರುವರು. ಇವರು, ತಮ್ಮ ತಾಲೂಕಿನ ಹಳ್ಳಿಯವರು ಕೊಡತಕ್ಕ ತೆರಿಗೆಗಳನ್ನು ಕಾಲಕಾಲಕ್ಕೆ ಮುಟ್ಟಿಸುವರೋ ಇಲ್ಲವೋ ಎಂಬದನ್ನು ನೋಡಬೇಕು. ಗ್ರಾಮದ ಲೆಕ್ಕದ ಕಾಗದಪತ್ರಗಳು ಸರಿಯಾಗಿ ಇಡಲ್ಪಟ್ಟವೆ ಎಂಬದನ್ನು

ಮೇಲಿಂದ ಮೇಲೆ ತಪಾಸು ಮಾಡಬೇಕು. ರೈತರು ಮುಟ್ಟಿಸುವ ಹಣಕ್ಕೆ ಅವರಿಗೆ ಪಾವತಿ ದೊರೆಯುತ್ತದೆಂಬದನ್ನು ಮನವರಿಕೆಮಾಡಿಕೊಳ್ಳಬೇಕು. ಹೊಲಗಳ ಮೇರೆಯ ಕಲ್ಲುಗಳೂ, ಒಡ್ಡುಗಳೂ ಸರಿಯಾಗಿ ಇಡಲ್ಪಟ್ಟವೆಂಬದನ್ನು ನೋಡಬೇಕು. ಅಂತು, ಗ್ರಾಮದ ಅಧಿಕಾರಸ್ಥರು ತಮ್ಮತಮ್ಮ ಕೆಲಸಗಳನ್ನು ತಪ್ಪದೆ ಮಾಡುವರೆಂಬದನ್ನು ನೋಡುತ್ತಿರಬೇಕು. ಇವರು ತಮ್ಮ ತಾಲೂಕಿನ ಲೋಕಲ್‌ಫಂಡಿನ ವ್ಯವಸ್ಥೆಯ ಮೇಲಧಿಕಾರಿಗಳಾಗಿರುವರು. ಇಷ್ಟಲ್ಲದೆ ಇವರು ತಮ್ಮ ತಾಲೂಕಿನಲ್ಲಿ ನಡೆಯುವ ಮುಲಕೀ ಫೌಜದಾರೀ ವ್ಯಾಜ್ಯಗಳ ನಿರ್ಣಯವನ್ನು ಮಾಡುವರು. ಇವರಿಗೆ ಬಹುತರವಾಗಿ ಎರಡನೇ ಮೂರನೇ ವರ್ಗದ ಮ್ಯಾಜಿಸ್ಟ್ರೇಟರ ಅಧಿಕಾರವಿರುತ್ತದೆ. ಜಿಲ್ಹೆಯಲ್ಲಿ ಒಬ್ಬಿಬ್ಬರು ಮಾಮಲೇದಾರರಿಗೆ ಮಾತ್ರ ೧ನೇ ವರ್ಗದ ಮ್ಯಾಜಿಸ್ಟ್ರೇಟರ ಅಧಿಕಾರವಿರುತ್ತದೆ.

ಜಿಲ್ಹೆಯಲ್ಲಿ ತಾಲೂಕುಗಳನ್ನು ಮಾಡಿದಂತೆ ತಾಲೂಕಿನಲ್ಲಿ ಕೆಲವು ಹಳ್ಳಿಗಳ ವಿಭಾಗಗಳನ್ನು ಮಾಡಿ ಅವುಗಳಿಗೆ ಮಾಮಲೇದಾರನಿಗೆ ಅಂಕಿತರಾದ ಸರ್ಕಲ್ ಇನ್‌ಸ್ಪೆಕ್ಟರರೆಂಬ ಅಧಿಕಾರಸ್ಥರನ್ನು ನೇಮಿಸಿರುವರು. ಅವರಿಗೆ ಮ್ಯಾಜಿಸ್ಟ್ರೇಟರ ಅಧಿಕಾರವಿರುವದಿಲ್ಲ.

ಹಳ್ಳಿಯಲ್ಲಿ ಮುಲಕೀ ಫೌಜದಾರೀ ಕೆಲಸಗಳ ಅಧಿಕಾರಸ್ಥನು ಗೌಡನು. ಕೆಲವು ಕಡೆಯಲ್ಲಿ ಇವೆರಡೂ ಕೆಲಸಗಳು ಒಬ್ಬ ಗೌಡನ ಕೈಯಲ್ಲಿಯೇ ಇರುತ್ತವೆ. ಕೆಲವು ಕಡೆಯಲ್ಲಿ ಮುಲಕೀ ಗೌಡ ಬೇರೆ, ಫೌಜದಾರೀ ಗೌಡ ಬೇರೆ ಇರುತ್ತಾರೆ. ಒಬ್ಬ ಗೌಡನು ಒಂದಕ್ಕಿಂತ ಹೆಚ್ಚು ಹಳ್ಳಿಗಳ ಕೆಲಸವನ್ನು ಮಾಡಬಹುದು. ಗೌಡನಿಗೆ ಅವನ ಭೂಮಿಯ ಮೇಲೆ ಸರಕಾರೀ ತೆರಿಗೆಯನ್ನು ಅಂಶತಃ ಅಥವಾ ಪೂರ್ಣವಾಗಿ ಮಾಫ ಮಾಡಿರುತ್ತದೆ. ಗೌಡನ ಕೈಕೆಳಗೆ ಲೆಕ್ಕ ಬರೆಯುವ ಮನುಷ್ಯನು ಕುಲಕರ್ಣಿ ಅಥವಾ ಶಾನಭೋಗನು. ಇವನು ಗೌಡನ ಕೈಕೆಳಗಿನ ಅಧಿಕಾರಸ್ಥನಾದಾಗ್ಯೂ ಯಾವತ್ತು ಸರಕಾರಿ ಕಾಗದಪತ್ರಗಳಿಗೆ ಗೌಡನ ಸಹಿಯಂತೆ ಕುಲಕರ್ಣಿಯ ಸಹಿಯಾದರೂ ಅವಶ್ಯವಿರುತ್ತದೆ. ವಿದ್ಯ ಕಲಿತ ಗೌಡನು ಅಪರೂಪ. ಕುಲಕರ್ಣಿಯು ಅಲ್ಪಸ್ವಲ್ಪ ಕಲಿತವನಿರುವನು. ಈ ಕಾರಣದಿಂದ ಊರೊಳಗೆ ಗೌಡನಿಗಿಂತ ಕುಲಕರ್ಣಿಯ ಅಮಲು ಬಹುತರ ಹೆಚ್ಚು ನಡೆಯುತ್ತಿರುತ್ತದೆ. ಕುಲಕರ್ಣಿಗೂ ಸಹ ಸರಕಾರದ ತೆರಿಗೆಯು ಮಾಫ ಇರುತ್ತದೆ. ಇವರಲ್ಲದೆ, ಇವರ ಕೈಕೆಳಗೆ ತಳ

ವಾರ, ಪಟ್ಟಣಶೆಟ್ಟಿ, ಹಳಬ ಮುಂತಾದ ಕಿರುಕಳ ಕಾಮುದಾರರೂ ಹಳ್ಳಿಹಳ್ಳಿಗೆ ಇರುವರು. ಇವರ ಭೂಮಿಗೂ ಸರಕಾರದ ಪೂರ್ಣ ತೆರಿಗೆ ಇರುವದಿಲ್ಲ. ತಳವಾರನು ವಸೂಲು ಮುಂತಾದ ಕೆಲಸಗಳಲ್ಲಿ ಗೌಡ ಕುಲಕರ್ಣಿಯರಿಗೆ ಸಹಾಯ ಮಾಡುತ್ತಾನೆ. ಪಟ್ಟಣಶೆಟ್ಟಿಯು ವರಿಷ್ಠಾಧಿಕಾರಿಗಳು ಬಂದಾಗ ಅವರ ಸರಬರಾಯಿಯ ಕೆಲಸಕ್ಕೆ ಸಹಾಯ ಮಾಡುತ್ತಾನೆ. ಹಳಬನು ಊರಿನ ಕಾವಲುಗಾರನಿರುವನು. ಇವರಲ್ಲದೆ ಜೋಯಿಸ, ಸೊನ್ನೆಗಾರ, ನಾದಿಗ, ಅಗಸ ಮುಂತಾದ ಬಲೂತಿದಾರರು ಊರಶನದ ಕೆಲಸಕ್ಕೆ ಪೂರ್ವ ದಲ್ಲಿ ಸಹಾಯ ಮಾಡುತ್ತಿದ್ದರು. ಆದರೆ ಅವರ ಚಾಕರಿಯು ಈಗ ಬೇಡಾದ್ದ ರಿಂದ ಇವರು ಸರಕಾರದ ನೌಕರಿಯಲ್ಲಿಲ್ಲ.

ದೇಶದಲ್ಲಿ ಶಾಂತತೆಯನ್ನು ರಕ್ಷಿಸುವ ಕೆಲಸವನ್ನು ಇಲಾಖೆಯ ಅಧಿ ಕಾರಸ್ಥರು ನೋಡಿಕೊಳ್ಳುತ್ತಾರೆ. ಈ ಜಿಲ್ಹೆಯಲ್ಲಿ ದಂಡಿನ ಸ್ಥಳಗಳು ಇಲ್ಲ. ಆದರೂ ಊರುಗಳಲ್ಲಿಯೂ, ಪಟ್ಟಣಗಳಲ್ಲಿಯೂ, ಕಳ್ಳರ ಹಾವಳಿಯೂ, ಕೊಲೆ ಸುಲಿಗೆಗಳೂ ನಡೆಯದಂತೆ ಪೊಲೀಸ ಖಾತೆಯವರು ನೋಡಿಕೊಳ್ಳುತ್ತಾರೆ. ಜಿಲ್ಹೆಗೆ ಒಬ್ಬ ಪೊಲೀಸ ಸುಪರಿಂಟೆಂಡೆಂಟ ಎಂಬ ಅಧಿಕಾರಸ್ಥನಿರುವನು. ಅವನ ಕೈಕೆಳಗೆ ಅಸಿಸ್ಟಂಟ ಪೊಲೀಸ ಸುಪರಿಂಟೆಂಡೆಂಟನೂ, ಡೆಪ್ಯುಟಿ ಪೊಲೀಸ ಸುಪರಿಂಟೆಂಡೆಂಟರೂ, ಇನ್‌ಸ್ಪೆಕ್ಟರರೂ, ಸಬ್‌ಇನ್‌ಸ್ಪೆಕ್ಟರರೂ ಇರುತ್ತಾರೆ.

ಜಿಲ್ಹೆಯ ಮುಖ್ಯ ನ್ಯಾಯಕೋರ್ಟಿನ ನ್ಯಾಯಾಧೀಶನು ಡಿಸ್ಟ್ರಿಕ್ಟ ಜಜ್ಜನು. ಇವನು ಮುಲಕೀ ಫೌಜದಾರೀ ವ್ಯಾಜ್ಯಗಳ ಅಪೀಲುಗಳನ್ನು ವಿಚಾರಿಸುವನು. ಇವನ ಕೈಕೆಳಗೆ ಅಸಿಸ್ಟಂಟ ಜಜ್ಜರೆಂದೂ ಸಬ್‌ಜಜ್ಜರೆಂದೂ ಅಧಿಕಾರಸ್ಥರಿರುವರು. ಸಬ್‌ಜಜ್ಜನು ೫ ಸಾವಿರ ರೂಪಾಯಿಯ ಒಳ ಗಿದ್ದ ದಿವಾಣೀ ವ್ಯಾಜ್ಯಗಳನ್ನು ತೀರಿಸುವನು. ಅಸಿಸ್ಟಂಟ ಜಜ್ಜನೂ ಡಿಸ್ಟ್ರಿಕ್ಟ ಜಜ್ಜನೂ ಫೌಜದಾರಿ ಅಪೀಲುಗಳನ್ನು ಸಹ ತೀರಿಸುವರು. ದೇಶದಲ್ಲಿ ಶಾಂತತೆ ಯನ್ನಿಡುವದು, ಜನರಿಗೆ ನ್ಯಾಯವನ್ನು ಕೊಡುವದು, ವಸೂಲಿಯ ಕೆಲಸ ವನ್ನು ಮಾಡುವದು ಇವುಗಳನ್ನು ಸರಕಾರದ ಆಯಾ ಖಾತೆಯ ಅಧಿಕಾರಸ್ಥರು ಮಾಡುವರು. ವ್ಯಾಪಾರ ಕಲಾಭಿವೃದ್ಧಿಗಳಿಗೆ ಅನುಕೂಲಗಳನ್ನು ಮಾಡಿ ಕೊಟ್ಟು, ಜನರ ವಿದ್ಯೆ ಆರೋಗ್ಯಗಳನ್ನು ಹೆಚ್ಚಿಸುವ ಕೆಲಸವನ್ನು ಕೆಲವಂಶ ದಲ್ಲಿ ಲೋಕಲ್‌ಬೋರ್ಡ ಮ್ಯುನಿಸಿಪಾಲಿಟಿ ಎಂಬ ಸ್ಥಾನಿಕ ಸಂಸ್ಥೆಗಳಿಗೆ

ಒಪ್ಪಿಸಿ, ಸರಕಾರದವರು ಈ ಸಂಸ್ಥೆಗಳ ವ್ಯವಸ್ಥೆಯನ್ನು ಮೇಲ್ವಿಚಾರಿಸುತ್ತಾರೆ. ಮತ್ತು ಅವುಗಳಿಗೆ ತಮ್ಮ ಹದ್ದಿನೊಳಗಿನ ಜನರ ಆರೋಗ್ಯ ವಿದ್ಯೆ ಮೊದಲಾದವುಗಳ ಬಗ್ಗೆ ತಾವೇ ಏರ್ಪಾಡುಗಳನ್ನು ಮಾಡುವದಕ್ಕೆ ಕಲಿಸುತ್ತ ಇದ್ದಾರೆ. ಈ ಸಂಸ್ಥೆಗಳು ಮಾಡುವ ಖರ್ಚಿನ ಕೆಲಭಾಗವನ್ನು ಸರಕಾರದವರು ಕೊಡುತ್ತಾರೆ. ಈ ಜಿಲ್ಹೆಯಲ್ಲಿ ಒಂದು ಡಿಸ್ಟ್ರಿಕ್ಟ, ಅಂದರೆ ಜಿಲ್ಹೆಯ ಲೋಕಲ್ ಬೋರ್ಡು, ಒಂದೊಂದು ತಾಲೂಕಿಗೆ ಒಂದೊಂದರಂತೆ ೮ ತಾಲೂಕ ಲೋಕಲ್ ಬೋರ್ಡುಗಳೂ ಅವೆ. ಭೂಮಿಯ ಮೇಲೆ ಕೂಡ್ರಿಸಿದ ತೆರಿಗೆಯ ಮೇಲೆ ರೂಪಾಯಿಗೆ ಒಂದು ಆಣೆಯಂತೆ ಸರಕಾರದವರು ತಕ್ಕೊಳ್ಳುವ ಹಣವು ಲೋಕಲ್‌ಫಂಡು ಅಂದರೆ ಸ್ಥಾನಿಕಹಣವೆನಿಸುತ್ತದೆ. ಲೋಕಲ್‌ಬೋರ್ಡಿನ ಉತ್ಪನ್ನದಲ್ಲಿ ಈ ಹಣವೂ, ಕೊಂಡವಾಡೆ ಟೋಲ್ ನಾಕೆಗಳ ಉತ್ಪನ್ನವೂ, ಶಾಲೆಯ ಫೀ ಮುಂತಾದ ಆಯಾ ಜಿಲ್ಹೆಯ ಆದಾಯವೂ ಬರುತ್ತದೆ. ಈ ಒಟ್ಟು ಉತ್ಪನ್ನದಲ್ಲಿ ಲೋಕಲ್‌ಬೋರ್ಡಿನವರು ಕನಿಷ್ಠಪಕ್ಷಕ್ಕೆ ೧/೨ ಹಣವನ್ನು ಶಿಕ್ಷಣದ ಬಗ್ಗೆ ಖರ್ಚು ಮಾಡಲೇಬೇಕೆಂದು ನಿರ್ಬಂಧವಿರುವದು. ಉಳಿದ ಹಣವನ್ನು ಹೊಸ ಮಾರ್ಗಗಳು, ನೀರಿನ ಪೂರೈಕೆ, ಧರ್ಮಶಾಲೆ, ವೈದ್ಯಶಾಲೆಗಳು ಮುಂತಾದ ಸಾರ್ವಜನಿಕ ಹಿತದ ಕೆಲಸಗಳ ಬಗ್ಗೆ ಖರ್ಚುಮಾಡತಕ್ಕದ್ದಿರುತ್ತದೆ. ಡಿಸ್ಟ್ರಿಕ್ಟಬೋರ್ಡಿನವರು ತಮ್ಮ ಆದಾಯದ ಕೆಲವೊಂದು ಭಾಗವನ್ನು ಆಯಾ ತಾಲೂಕುಗಳಲ್ಲಿ ನಡಿಯುವ ಕೆಲಸಗಳಿಗೋಸ್ಕರ, ತಾಲೂಕ ಲೋಕಲ್ ಬೋರ್ಡುಗಳ ವಶಕ್ಕೆ ಕೊಡುತ್ತಾರೆ.

ತಾಲೂಕಬೋರ್ಡುಗಳಲ್ಲಿ ಜನರಿಂದ ಆರಿಸಿ ಬಂದ ಸಭಾಸದರ ಸಂಖ್ಯೆಯೂ, ಸರಕಾರದವರು ನೇಮಿಸಿದ ಸಭಾಸದರ ಸಂಖ್ಯೆಯೂ ಸರಿ ಇರುವವು. ಜಿಲ್ಹೆಯ ಬೋರ್ಡಿನಲ್ಲಿಯೂ ಕೆಲವರನ್ನು ಸರಕಾರದವರು ನೇಮಿಸುವರು. ಕೆಲವರನ್ನು ತಾಲೂಕಬೋರ್ಡಿನವರು ತಮ್ಮೊಳಗಿಂದ ಆರಿಸಿ ಕಳಿಸುವರು. ಕಲೆಕ್ಟರನು ಜಿಲ್ಹೆಯ ಬೋರ್ಡಿನ ಪ್ರೆಸಿಡೆಂಟನಿರುವನು. ಅವನ ಅಸಿಸ್ಟಂಟರು ತಮ್ಮ ಕೈಕೆಳಗಿರುವ ತಾಲೂಕಬೋರ್ಡುಗಳ ಪ್ರೆಸಿಡೆಂಟರಿರುವರು. ಪ್ರೆಸಿಡೆಂಟನನ್ನು ಬೋರ್ಡಿನವರೇ ಆರಿಸುವರು. ಜಿಲ್ಹೆಯಲ್ಲಿ ಬರಬಿದ್ದರೆ, ಇಲ್ಲವೆ ಸ್ಪರ್ಶಜನ್ಯ ರೋಗಗಳು ಆರಂಭವಾದರೆ, ಈ ಸಂಘದವರು ಸರಕಾರಕ್ಕೆ ಕೈಲಾದಷ್ಟು ಸಹಾಯವನ್ನು ಮಾಡಬೇಕಾಗುವದು.

ದೊಡ್ಡ ಊರುಗಳಲ್ಲಿ ಆಯಾ ಊರುಗಳ ಹಿತದ ಬಗ್ಗೆ, ವ್ಯವಸ್ಥೆಯನ್ನು

ಮಾಡುವ ಸಂಘಗಳಿರುವವು. ಈ ಸಂಘದವರು ಊರವರ ಆರೋಗ್ಯ, ಬೀದಿಗಳ ಸ್ವಚ್ಛತೆ, ರಾತ್ರಿಯಲ್ಲಿ ದೀಪ ಮುಂತಾದ ಊರವರ ಹಿತದ ಕೆಲಸಗಳನ್ನು ಮಾಡುವರು. ಇವರ ಆದಾಯದ ಸಾಧನಗಳು ಮನೆಪಟ್ಟಿ, ಗಾಡೀಪಟ್ಟಿ, ಹೊರಗಿನಿಂದ ಬರುವ ಮಾಲಿನ ಮೇಲಿನ ಜಕಾತಿ ಮುಂತಾದವುಗಳು ಇರುತ್ತವೆ. ಊರಿನ ಪ್ರಾಥಮಿಕ ಶಿಕ್ಷಣದ ಜವಾಬುದಾರಿಯು ಈ ಸಂಘದವರ ಮೇಲಿರುವದು. ಈ ಜಿಲ್ಹೆಯಲ್ಲಿ ಇಂಥ ಮ್ಯುನಿಸಿಪಾಲಿಟಿಗಳಿರುವ ಊರುಗಳು ೪ ಇರುವವು. ಅವು ಯಾವವೆಂದರೆ—ವಿಜಾಪುರ, ಬಾಗಲಕೋಟೆ, ಗುಳೇದಗುಡ್ಡ, ಇಲಕಲ್ಲು.

ಸರಕಾರದವರು ಜನರಿಗೆ ಸಾರ್ವಜನಿಕ ಕೆಲಸಗಳಲ್ಲಿ ಶಿಕ್ಷಣವು ದೊರೆಯಬೇಕೆಂದು ಇಂಥ ಸಂಘಗಳನ್ನು ನಿರ್ಮಿಸಿದಾಗ್ಯೂ ಜನರಲ್ಲಿ ಸ್ಥಾನಿಕವ್ಯವಸ್ಥೆಯನ್ನು ಸರಿಯಾಗಿ ಮಾಡಿಕೊಳ್ಳಲಿಕ್ಕೆ ಸಾಕಷ್ಟು ಉತ್ಸಾಹವು ಇನ್ನೂ ಉಂಟಾದಂತೆ ತೋರುವದಿಲ್ಲ. ಆದರೂ ಈ ಸಂಘಗಳಲ್ಲಿ ಸೇರುವ ಜನರು ತಾವು ವಹಿಸಿಕೊಂಡ ಕೆಲಸಗಳನ್ನು ಮನಃಪೂರ್ವಕವಾಗಿ ಮಾಡಿ ಸಾರ್ವಜನಿಕ ಕೆಲಸಗಳನ್ನು ಮಾಡುವ ತಮ್ಮ ಯೋಗ್ಯತೆಯನ್ನು ಕ್ರಮೇಣ ಬೆಳೆಯಿಸಿಕೊಳ್ಳುವರೆಂದು ನಂಬಲಿಕ್ಕೆ ಆಧಾರವಿದೆ.

ಸರಕಾರದವರು ಇಂಗ್ಲಿಷ ಶಾಲೆಗಳಿಗೂ ಹಣದ ಸಹಾಯವನ್ನು ಮಾಡಿ, ಲೋಕಶಿಕ್ಷಣದ ಕೆಲಸವನ್ನು ಸಾಗಿಸುತ್ತಿರುವರು. ಸರಕಾರದ ಎಲ್ಲ ತರದ ಹೊಸ ಕಟ್ಟಡಗಳನ್ನು ಕಟ್ಟಲಿಕ್ಕೂ, ಇದ್ದ ಕಟ್ಟಡಗಳನ್ನು ದುರಸ್ತು ಮಾಡಲಿಕ್ಕೂ, ಸಾರ್ವಜನಿಕ ಮಾರ್ಗಗಳನ್ನು ಮಾಡಲಿಕ್ಕೂ, ಪಬ್ಲಿಕ ವರ್ಕ್ಸ ಖಾತೆ ಎಂಬ ಖಾತೆಯನ್ನು ಏರ್ಪಡಿಸಿ, ವ್ಯಾಪಾರಕ್ಕೂ ಜನರಿಗೂ ಅನುಕೂಲ ಮಾಡಿ ಕೊಟ್ಟಿರುತ್ತಾರೆ. ಇದಲ್ಲದೆ ಟಪಾಲ, ತಂತೀಟಪಾಲುಗಳ ಖಾತೆಗಳನ್ನು ನಿರ್ಮಿಸಿರುವರು. ಕಡೆಯ ಎರಡು ಖಾತೆಗಳಿಂದ ಜನರಿಗೆ ಅನುಕೂಲವೂ ಸರಕಾರಕ್ಕೆ ಉತ್ಪನ್ನವೂ ಆಗುವದು. ಜನರಿಗೆ ರೋಗಗಳು ತಟ್ಟಿದರೆ ಚಿಕಿತ್ಸೆಯೂ, ಔಷಧೋಪಚಾರಗಳೂ ಆಗುವಂತೆ ಜಿಲ್ಹೆಯ ಮುಖ್ಯ ಸ್ಥಳದಲ್ಲಿ ಒಂದು ಆಸ್ಪತ್ರಿಯನ್ನೂ, ಮಿಕ್ಕ ದೊಡ್ಡ ಊರುಗಳಲ್ಲಿ ಒಂದೊಂದು ಔಷಧಾಲಯವನ್ನೂ ಇಟ್ಟಿರುವರು. ಈ ದೇಶದಲ್ಲಿ ಮೈಲಿಯ ಉಪದ್ರವವು ಕಡಿಮೆಯಾಗಬೇಕೆಂದು ಮೈಲೀ ತೆಗೆಯುವ ಅಧಿಕಾರಸ್ಥರನ್ನು ನೇಮಿಸಿರುವರು. ಹುಚ್ಚರಿಗೆ ಔಷಧೋಪಚಾರಗಳನ್ನು ಮಾಡುವ ಒಂದು ಆಸ್ಪತ್ರಿಯೂ ಧಾರವಾಡದಲ್ಲಿ ಉಂಟು.

# ೧೧ನೆಯ ಪ್ರಕರಣ.

## ರಾಜಕೀಯ ವಿಭಾಗಗಳು.

ವಿಜಾಪುರ ಜಿಲ್ಹೆಯಲ್ಲಿ ೮ ತಾಲೂಕುಗಳುಂಟು. ಹಿಂದೆ ಕೊಟ್ಟ ಕೋಷ್ಟ
ದಲ್ಲಿ ಅವುಗಳ ಹೆಸರು, ಕ್ಷೇತ್ರ, ಜನಜಂಖ್ಯೆ, ಆದಾಯ ಮುಂತಾದ ಸಂಗ
ಗಳಿರುತ್ತವೆ. ಕೆಲವು ತಾಲೂಕುಗಳು ವಿಸ್ತಾರದಿಂದ ಬಹಳ ದೊಡ್ಡವಿದ್ದರು
ಜನಸಂಖ್ಯೆಯ ಮಾನದಿಂದಲೂ, ಉತ್ಪನ್ನದ ಮಾನದಿಂದಲೂ ಸಣ್ಣವಿರುವವ
ಬಾಗಲಕೋಟೆ ತಾಲೂಕಿನಲ್ಲಿ ಹಳ್ಳಿಗಳು ಹೆಚ್ಚು ಇದ್ದು, ಕೆಲವು ಬಾಗಲಕೋ
ಯಿಂದ ಬಹಳ ದೂರ ಇರುವದರಿಂದ, ಬೀಳಗಿಯ ಸುತ್ತಲಿನ ಕೆಲವು ಹ
ಗಳನ್ನು ಕೂಡಿಸಿ ಪೇಟೆಯನ್ನು ಮಾಡಿರುವರು. ತಾಲೂಕುಗಳಿಗೆ ಮಾಮಲ
ದಾರರಿರುವಂತೆ ಪೇಟೆಗೆ 'ಮಹಾಲಕರಿ' ಎಂಬ ಅಧಿಕಾರಸ್ಥನಿರುವನು. ಇ
ನಿಗೆ ಖಜಾನೆಯ ಕೆಲಸವು ಬೀಳುವದಿಲ್ಲ. ಆದರೆ ಮಾಮಲೇದಾರರಂ
ಇವನಿಗಾದರೂ ಮುಲ್ಕೀ ಫೌಜದಾರೀ ಅಧಿಕಾರಗಳಿರುತ್ತವೆ.

ವಿಜಾಪುರ ಜಿಲ್ಹೆಯಲ್ಲಿ ದೇಶೀಯ ಅರಸರ ಸಂಸ್ಥಾನಗಳೂ ಕೆಲವು ಇರ
ತ್ತವೆ. ಅವುಗಳಲ್ಲಿ 'ಜತ' ಸಂಸ್ಥಾನವು ಒಂದಾಗಿದೆ. ಇದು ಈ ಜಿಲ್ಹೆಯ
ವಾಯವ್ಯದಲ್ಲಿ ಇರುತ್ತದೆ. ಇದರ ಕ್ಷೇತ್ರಫಲವು ೮೮೪ ಚೌ. ಮೈಲ
ಜನಸಂಖ್ಯೆ ೬೯೮೧೪. ಇಲ್ಲಿಯ ಸಂಸ್ಥಾನಿಕನು 'ಢಫಳೆ' ಎಂಬ ಮಹಾರಾಷ್ಟ
ಮನೆತನಕ್ಕೆ ಹೊಂದಿದವನು. ಅವನು 'ಜತ' ಎಂಬಲ್ಲಿಯೇ ಇರುತ್ತಾನ
ವಿಜಾಪುರ ಜಿಲ್ಹೆಯ ಕಲೆಕ್ಟರನು ಅದರ ಪೋಲಿಟಿಕಲ್ ಏಜಂಟನಿರುತ್ತಾನ
ಇವಲ್ಲದೆ ಇಂಡೀ ತಾಲೂಕಿನಲ್ಲಿ ಸಾಂಗಲೀ ಸಂಸ್ಥಾನದ ಕೆಲವು ಹಳ್ಳಿಗಳೂ
ಸಿಂದಗಿ, ಹುನಗುಂದ ತಾಲೂಕುಗಳಲ್ಲಿ ನಿಜಾಮ ಸರಕಾರದ ಕೆಲವು ಹ
ಗಳೂ ಇರುತ್ತವೆ.

## ವಿಜಾಪುರ ಜಿಲ್ಹೆಯ ತಾಲೂಕುಗಳ ಕ್ಷೇತ್ರಫಲ ಜನಸಂಖ್ಯೆ ಮುಂತಾದವುಗಳನ್ನು ತೋರಿಸುವ ಪಟ್ಟಿ.

| ನಂಬರು. | ತಾಲೂಕುಗಳು. | ಕ್ಷೇತ್ರಫಲ, ಚೌ. ಮೈಲು. | ಜನಸಂಖ್ಯೆ. | ಚೌ. ಮೈಲಿಗೆ ಜನಸಂಖ್ಯೆ. | ಭೂಮಿಯ ಆದಾಯ. | ಮಳೆಯ ಸರಾ ಸರಿ ಇಂಚು. | ಶರಾ. |
|---|---|---|---|---|---|---|---|
| ೧ | ಬದಾಮಿ | ೬೭೬ | ೧೦೮೨೦೨ | ೧೬೦.೬ | ೧೧೦೨೮೨ | ೨೪ | |
| ೨ | ಬಾಗಲಕೋಟಿ (ಬೀಳಗಿ) | ೬೮೩ | ೧೨೭೪೩೪ | ೧೮೬.೫ | ೧೨೩೧೯೯ | ೨೨ | |
| ೩ | ಬಾಗೇವಾಡಿ | ೭೬೪ | ೧೦೯೭೨೬ | ೧೧೭.೪ | ೮೩೬೨೦ | ೨೮ | |
| ೪ | ವಿಜಾಪುರ | ೮೬೯ | ೧೨೨೬೩೦ | ೧೪೧.೧ | ೧೦೨೪೧೬ | ೨೪ | |
| ೫ | ಹುನಗುಂದ | ೫೧೮ | ೧೧೦೫೮೧ | ೨೧೩.೪ | ೧೨೧೦೫೦ | ೨೩ | |
| ೬ | ಇಂಡಿ | ೮೭೧ | ೯೮೮೨೯ | ೧೧೩.೪ | ೭೫೮೬೬ | ೨೭ | |
| ೭ | ಮುದ್ದೇಬಿಹಾಳ | ೫೬೪ | ೮೯೪೮೭ | ೧೫೮.೬ | ೬೯೮೩೪ | ೨೩ | |
| ೮ | ಸಿಂದಗಿ | ೮೧೨ | ೯೦೦೮೪ | ೧೧೦.೯ | ೮೬೨೪೭ | ೨೬ | |

## ೧೨ನೆಯ ಪ್ರಕರಣ.

### ಮಹತ್ವದ ಊರುಗಳು.

ಐಹೊಳೆ (ಸ. ಸ. ಎತ್ತರ ೧೭೧೮').— ಹುನಗುಂದದ ಪಶ್ಚಿಮಕ್ಕೆ ೧
ಮೈಲಿನ ಮೇಲೆ, ಅಥವಾ ಬದಾಮಿಯ ಪೂರ್ವಕ್ಕೆ ೧೬ ಮೈಲಿನ ಮೇ
ಮಲಾಪಹಾರಿಯ ದಂಡೆಯ ಮೇಲೆ ಈ ಗ್ರಾಮವಿರುತ್ತದೆ. ಪರಶುರಾಮ
ಕ್ಷತ್ರಿಯರನ್ನು ಕೊಂದ ಬಳಿಕ, ಇಲ್ಲಿ ಮಲಾಪಹಾರಿಯೊಳಗೆ ತನ್ನ ಕೊ
ಯನ್ನು ತೊಳೆದನೆಂದು ಹೇಳುತ್ತಾರೆ. ಕೊಡ್ಲೆಯ ಆಕಾರದ್ದೊಂದು ಬಂಡೆಯ
ನದಿಯ ದಂಡೆಯ ಮೇಲೆ ಇರುತ್ತದೆ. ಅದರ ಬಳಿಯಲ್ಲಿಯೇ ಪರಶುರಾಮ
ಪಾದಗಳೆಂದು ಕಲ್ಲುಗಳನ್ನು ತೋರಿಸುತ್ತಾರೆ. ಈ ಕಲ್ಲುಗಳ ಹತ್ತರ ಇ
ರಾಮಲಿಂಗನ ಗುಡಿಯು ಬಹಳೇ ಪ್ರಾಚೀನಕಾಲದ್ದಿರುತ್ತದೆ. ಈ ಗುಡಿಯಿಂ
ಊರಿನ ತನಕ ಕಲ್ಲುಹಾಸಿಗೆಯ ಬೀದಿಯೂ ಎಡಬಲಗಳಲ್ಲಿ ಹಾಳುಗು
ಗಳೂ ಇರುತ್ತವೆ. ಊರ ಹೊರಗಿರುವ ಮೇಗುಡಿ ಎಂಬ ದೇವಸ್ಥಾನವನ
ಚಾಲುಕ್ಯರ ೨ನೇ ಪುಲಿಕೇಶಿಯ ಆಳಿಕೆಯಲ್ಲಿ ರವಿವರ್ಮನೆಂಬವನು ಶ
೫೫೬ರಲ್ಲಿ ಕಟ್ಟಿಸಿದನೆಂದು ಬರೆದಿದೆ. ಕರ್ನಾಟಕದಲ್ಲಿ ಎಲ್ಲಕ್ಕೂ ಹಳೆ
ದೆಂದು ಹೇಳಿಸಿಕೊಳ್ಳುವ ಇಲ್ಲಿಯ ದುರುಗವ್ವನ ಗುಡಿಯ ಬಾಗಿಲಿನ ಮೇ
ಕ್ರಿ. ಶ. ೬೩೦ರಿಂದ ೬೮೦ರ ವರೆಗೆ ಆಳಿದ ಚಾಲುಕ್ಯ ವಿಕ್ರಮನ ಹೆಸರು ಬ
ದದೆ. ಇಲ್ಲಿಯ ಯಾವತ್ತು ಗುಡಿಗಳಲ್ಲಿಯೂ ಚಾಲುಕ್ಯರ ಕಾಲದ ಅಂದ
೯ನೇ ಶತಮಾನದ ಪೂರ್ವದ ಲಿಪಿಗಳಿರುತ್ತವೆ. ಊರ ಹೊರಗೆ ಲಿಂಗಗ
ಗಂತೂ ಲೆಕ್ಕವೇ ಇಲ್ಲ.

ಅರಸೀಬೀಡಿ (ಸ. ಸ. ಎತ್ತರ ೨೦೦೦').— ಹುನಗುಂದದ ದಕ್ಷಿಣಕ್ಕೆ ೧
ಮೈಲಿನ ಮೇಲೆ ಇರುತ್ತದೆ. ಪೂರ್ವದಲ್ಲಿ ಇದಕ್ಕೆ ವಿಕ್ರಮಪುರವೆನ್ನುತ್ತಿದ್ದರ
ಚಾಲುಕ್ಯರ ವಿಖ್ಯಾತನಾದ ೬ನೇ ವಿಕ್ರಮಾದಿತ್ಯನು ಈ ಊರನ್ನು ಕಟ್ಟಿ
ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಕಲಚೂರಿ ವಂಶದವನಾ
ಬಿಜ್ಜಳನು ಚಾಲುಕ್ಯರ ರಾಜ್ಯವನ್ನು ಆಕ್ರಮಿಸಿದ ಬಳಿಕ ಈ ಊರು ಹಾಳಾ
ತೆಂದು ತೋರುತ್ತದೆ.

ಆಲಮೇಲ (ಸ. ಸ. ಎತ್ತರ ೧೫೦೬').— ಸಿಂದಗಿಯ ಉತ್ತರಕ್ಕೆ ೧

ಮೈಲಿನ ಮೇಲೆ ಇರುತ್ತದೆ. ಈ ಊರನ್ನು ಬಿಜ್ಜಳರಾಯನು ಕಟ್ಟಿಸಿದನೆಂದು ಹೇಳುತ್ತಾರೆ. ರಾಮಲಿಂಗನ ಗುಡಿಯು ಪುರಾತನದ್ದು. ಗರ್ಭಾಗಾರದ ಮೇಲೆ ಒಂದು ಆನೆಯು ಮೂವರು ಮನುಷ್ಯರನ್ನು ಸೊಂಡೆಯಲ್ಲಿ ಹಿಡಿದುಕೊಂಡು ಹೋಗುವ ಹಾಗೆ ಚಿತ್ರವನ್ನು ಕೊರೆದಿದ್ದಾರೆ. ಊರ ಹೊರಗಿನ ಹಾಳಾದದ್ದೊಂದು ಹನುಮಂತನ ಗುಡಿಯಲ್ಲಿ ಒಬ್ಬ ಮನುಷ್ಯನನ್ನು ಎರಡು ಆನೆಗಳು ಮೇಲಕ್ಕೆ ಎತ್ತಿದ ಹಾಗೆ ಚಿತ್ರವನ್ನು ಕಟಿದಿದ್ದಾರೆ. ಇನ್ನೊಂದು ಅರ್ವಾಚೀನ ಕಾಲದ ಈಶ್ವರನ ಗುಡಿಯನ್ನು ರಾಮಜಿ ನರಸಿಂಹ ಬಿನೀವಾಲೆ ಎಂಬವನು ಸನ್ ೧೭೮೩ರಲ್ಲಿ ಕಟ್ಟಿಸಿದನೆಂದು ಹೇಳುತ್ತಾರೆ. ಮುಧೋಳದ ಮಾಲೋಜಿರಾವ ಘೋರ್ಪಡೆ ಎಂಬ ಸರದಾರನ ವಶದಲ್ಲಿ ಆಲಮೇಲ ಪ್ರಾಂತ ವಿದ್ದಾಗ ೧೮೦೦ನೇ ವರ್ಷ ಒಂದು ಭವಾನಿಯ ಗುಡಿಯನ್ನು ಕಟ್ಟಿಸಿರುವನು. ಆಲಮೇಲದ ದೇಶಪಾಂಡೆ ಶೇಷಗಿರಿರಾಯನೆಂಬವನು ೧೭೮೮ರಲ್ಲಿ ರಾಮದೇವರ ಗುಡಿಯನ್ನು ಕಟ್ಟಿಸಿದನು. ಅದಕ್ಕೆ ಪೇಶವೆಯವರಿಂದ ದೊರೆತ ಇನಾಮು ಈಗ್ಯೂ ನಡೆಯುತ್ತದೆ. ಇವಲ್ಲದೆ, ಮಾರುತೀ ಗುಡಿ, ಬಸವೇಶ್ವರನ ಗುಡಿ, ದೇವಪ್ಪಯ್ಯನ ಸಮಾಧಿ, ಗಾಲೀಬ ಸಾಹೇಬನ ಗೋರಿ, ಅಕ್ಕ ತಂಗಿಯರಭಾವಿ, ಲಕ್ಷ್ಮಿಯಗುಡಿ ಮುಂತಾದ ಪೂರ್ವಕಾಲದ ಸ್ಮಾರಕಗಳುಂಟು. ಇವುಗಳೊಳಗಿನ ಪ್ರತಿಯೊಂದಕ್ಕೂ ಒಂದೊಂದು ಚಮತ್ಕಾರದ ಕಥೆಯನ್ನು ಇಲ್ಲಿಯ ಜನರು ಹೇಳುವರು.

ಆಗರಖೇಡ (ಸ. ಸ. ಎತ್ತರ ೧೫೬೦′).—(ಅಗ್ರಖೇಟಕ) ಇಂಡಿಯ ಈಶಾನ್ಯಕ್ಕೆ ೧೫ ಮೈಲಿನ ಮೇಲೆ ಇರುತ್ತದೆ. ಶಂಕರಲಿಂಗ, ಧೈರಪ್ಪ ಎಂಬ ಎರಡು ಹಳೇ ಗುಡಿಗಳಿರುತ್ತವೆ. ಧೈರಪ್ಪನ ಗುಡಿಯನ್ನು ಕಟಿದ ಒಣಕಲ್ಲಿನಿಂದ ಕಟ್ಟಿದ್ದಾರೆ. ಇಂಥ ಗುಡಿಗಳಿಗೆ ಕರ್ನಾಟಕದಲ್ಲಿ ಜಕಣಾಚಾರ್ಯರ ಗುಡಿಗಳೆಂತಲೂ, ಮಹಾರಾಷ್ಟ್ರದಲ್ಲಿ ಹೇಮಾಡಪಂತಿಯೆಂತಲೂ ಅನ್ನುವರು. ಈ ಊರು ಆದ್ಯರೆಂಬ ಮನೆತನದ ಆಚಾರ್ಯರಿಗೆ ಅಗ್ರಹಾರವಿರುತ್ತದೆ. ಹೇಮಾಡಪಂತನು ದೇವಗಿರಿಯ ರಾಮರಾಜನ ಮಂತ್ರಿ ಇದ್ದನು. ದ್ವಾಪರ ಯುಗದಲ್ಲಿ ಲಂಕೆಯ ವಿಭೀಷಣನಿಗೆ ಔಷಧ ಕೊಟ್ಟು ಅವನ ರೋಗ ಪರಿಹಾರ ಮಾಡಿದ ಹೇಮಾಡಪಂತನು ಬೇರೆ. ಅವನು ಲಂಕೆಯಿಂದ ಮೋಡೀ ಲಿಪಿಯನ್ನು ತಂದನೆಂದು ಹೇಳುತ್ತಾರೆ.

ವಿಜಾಪುರ (ಸ. ಸ. ಎತ್ತರ ೧೯೬೬′).—ಉತ್ತರ ಅಕ್ಷಾಂಶ ೧೬°, ೫೦′,

ಪೂರ್ವರೇಖಾಂಶ ೭೫°, ೪೮′. ಇದು ಸಮುದ್ರಸಪಾಟಿಯಿಂದ ೧೯೫
ಫೂಟು ಎತ್ತರವಿರುತ್ತದೆ. ಇದು ಈಗ ಜಿಲ್ಹೆಯ ಹಾಗು ತಾಲೂಕಿನ ಮು
ಸ್ಥಳವಿರುತ್ತದೆ. ಇಲ್ಲಿ ಕಲೆಕ್ಟರ ಕಚೇರಿ, ಜಜ್ಜ ಕೋರ್ಟು, ಸಬ್‌ಜ
ಕೋರ್ಟು, ಮಾಮಲೇದಾರ ಕಚೇರಿ, ಎಂಜನಿಯರ ಕಚೇರಿ, ಪಂಚಕಚೆ
ಪೋಸ್ಟ ಆಫೀಸು, ದವಾಖಾನೆ, ಹೈಸ್ಕೂಲು, ಫಾರೆಸ್ಟ ಕಚೇರಿ, ಪೋಲಿ
ಹೆಡ್‌ಕ್ವಾರ್ಟರ, ಶಾಲಾ ಡೆಪ್ಯುಟಿಯವರ ಕಚೇರಿ ಮುಂತಾದವುಗಳುಂ
ರೇಲ್ವೆ ಸ್ಟೇಶನು ಊರ ಸಮೀಪದಲ್ಲಿಯೇ ಉಂಟು. ಇಲ್ಲಿಯ ಹವೆಯು ಬ
ಆರೋಗ್ಯಕರವಾದದ್ದು. ಊರೊಳಗಿನ ಬೀದಿಗಳು ವಿಸ್ತಾರವಾಗಿ ಸ್ವ
ಇರುತ್ತವೆ. ೨ ಮೈಲಿನ ಮೇಲಿರುವ ಒಂದು ದೊಡ್ಡ ಕೆರೆಯಿಂದ ಊರ ತು
ನಳಗಳನ್ನು ತಂದಿರುವರು. ಕಾಳಿನ, ಮತ್ತು ಅರಳೆಯ ವ್ಯಾಪಾರವು
ದಿನಕ್ಕೆ ಹೆಚ್ಚುತ್ತಿರುವದು. ಸನ್ ೧೮೮೫ನೇ ಇಸವಿಯಲ್ಲಿ ಕಲಾದಗಿಯನ
ಮುರಿದು ಜಿಲ್ಹೆಯ ಮುಖ್ಯ ಸ್ಥಳವನ್ನು ಇಲ್ಲಿಗೆ ತಂದರು. ಅಂದಿನಿಂದ ಇ
ಬೆಳಿಗೆಗೆ ಮತ್ತೆ ಪ್ರಾರಂಭವಾಯಿತು. ಪೂರ್ವಕಾಲದಲ್ಲಿ ಇದು ಅದಿಲ್‌ಶಾ
ರಾಜ್ಯದ ರಾಜಧಾನಿಯಾಗಿತ್ತು. ಆ ಕಾಲಕ್ಕೆ ಪಟ್ಟಣವು ಒಳ್ಳೇ ಬೆಳಿಗೆಯ ಸ್ಥಿ
ಯಲ್ಲಿತ್ತು. ಆಗ ಹತ್ತು ಲಕ್ಷಕ್ಕಿಂತ ಹೆಚ್ಚು ಜನವಸತಿಯು ಇಲ್ಲಿ ಇತ್ತೆಂ
ಹೇಳುತ್ತಾರೆ. ಈ ಪಟ್ಟಣದ ಸುತ್ತಲಿರುವ ಕೋಟೆಯು ೮ ಮೈಲು ಉದ್ದವಿ
ಆಯಾ ಕಾಲಕ್ಕೆ ಬಂದ ಬೇರೆ ಬೇರೆ ದೇಶದ ಪ್ರವಾಸಿಗಳು ಈ ಪಟ್ಟಣವನ
ನೋಡಿ ಮಾಡಿದ ವರ್ಣನೆಗೆ ಅಳತೆಯಿಲ್ಲ. ಇಲ್ಲಿ ನೋಡತಕ್ಕಂಥ ಭವ್ಯಸ್ಥ
ಗಳು ಅನೇಕ ಉಂಟು. ಅವುಗಳಲ್ಲಿ ಮುಖ್ಯವಾದವುಗಳು ಯಾವವೆಂದರೆ-
ಗೋಲಗುಮುಟ, ಜುಮ್ಮಾಮಸೀದೆ, ಆಸಾರಮಹಾಲು, ಮೆಹೆತರಿಮಹಾಲ
ಇಬ್ರಾಹಿಮರೋಝಾ, ಮುತ್ತಿನ ಮಸೀದೆ, ಉಪರಿಬುರುಜು, ಮುಲು
ಮೈದಾನೆಂಬ ತೋಫು, ತಾಜಬಾವಡಿ, ಚಂದಾಬಾವಡಿ ಮುಂತಾದವುಗಳ

ಈ ಊರಲ್ಲಿ ಉತ್ತಮ ಊದಿನಕಡ್ಡಿ, ಮಸಾಲೀ ಎಣ್ಣೆ, ಬುಕ್ಕಿಟ
ಮುಂತಾದ ಸುಗಂಧದ ಪದಾರ್ಥಗಳು ತಯಾರಾಗುತ್ತವೆ. ಇಲ್ಲಿಯ ಚರ್ಮ
ಜೋಡುಗಳಂತೂ ಪ್ರಸಿದ್ಧವಾಗಿರುವವು. ಇಲ್ಲಿಂದ ಕುಸುಬೆಯ ಎಣ್ಣೆಯ
ಪರಸ್ಥಳಕ್ಕೆ ಬಹಳ ಹೋಗುತ್ತದೆ.

ಬಾಗಲಕೋಟಿ (ಸ. ಸ. ಎತ್ತರ ೧೬೭೩′).—ವಿಜಾಪುರದ ದಕ್ಷಿಣಕ್ಕೆ
ಮೈಲಿನ ಮೇಲೆ ಘಟಪ್ರಭಾ ನದಿಯ ದಂಡೆಯ ಮೇಲೆ ಇರುತ್ತದೆ. ಇ

ತಾಲೂಕಿನ ಮುಖ್ಯ ಸ್ಥಳವು. ಇಲ್ಲಿ ಮಾಮಲೇದಾರ ಕಚೇರಿ, ಮುನಸೀಫ ಕೋರ್ಟು, ದವಾಖಾನೆ, ಮ್ಯುನಿಸಿಪಾಲಿಟಿ ಕಚೇರಿಗಳುಂಟು. ರೇಲ್ವೆ ಸ್ಟೇಶನು ಊರ ಸಮೀಪದಲ್ಲಿರುತ್ತದೆ.

ಈ ಊರು ದೊಡ್ಡ ವ್ಯಾಪಾರದ ಸ್ಥಳವಿರುತ್ತದೆ. ಇಲ್ಲಿ ಸೀರೆಗಳೂ ಧೋತರಗಳೂ ಹುಟ್ಟುತ್ತವೆ. ಇಲ್ಲಿ ಕಾಳಿನ ಮತ್ತು ಅರಳೆಯ ವ್ಯಾಪಾರವು ಅತಿಶಯವಾಗಿ ಆಗುತ್ತದೆ. ಹತ್ತಿಯನ್ನು ಅರೆಯುವ, ಅರಳೆಯನ್ನು ಒತ್ತಿ ಗಂಟುಕಟ್ಟುವ ಮತ್ತು ನೂಲುವ ಗಿರಣಿಗಳನೇಕವುಂಟು. ಇದಲ್ಲದೆ ರೇಶಿಮೆ, ಬೆಳ್ಳಿ, ಬಂಗಾರ ಮತ್ತು ನೀಲಿ, ಕಂಬಳಿ ಮುಂತಾದವುಗಳ ವ್ಯಾಪಾರವಾದರೂ ವಿಶೇಷವಾಗಿ ಆಗುತ್ತದೆ. ದಕ್ಷಿಣ ಮಹಾರಾಷ್ಟ್ರದಲ್ಲಿ ಹುಬ್ಬಳ್ಳಿಯ ಕೆಳಗೆ ಈ ಊರು ವ್ಯಾಪಾರದ ಮುಖ್ಯ ಸ್ಥಳವೆನಿಸುತ್ತದೆ.

ಬಾಗಲಕೋಟೆಯು ಆರಂಭದಲ್ಲಿ ರಾವಣನ ಬಜಂತ್ರಿಯವರ ಗ್ರಾಮ ವಿತ್ತೆಂದು ಹೇಳುತ್ತಾರೆ. ಅದರಿಂದ ಈ ಊರು ಬಹು ಪುರಾತನಕಾಲದ್ದೆಂದು ತೋರುತ್ತದೆ. ವಿಜಾಪುರದ ಬಾದಶಹನು ತನ್ನ ಮಗಳ ಬಳೆಯ (ಬಾಂಗಡಿ ಗಳ) ವೆಚ್ಚಕ್ಕಾಗಿ ಈ ಊರನ್ನು ಹಚ್ಚಿಕೊಟ್ಟದರಿಂದ ಇದಕ್ಕೆ ಬಾಂಗಡಿಕೋಟ ಎಂದು ಹೆಸರು ಬಂತೆಂದು ಕೆಲವರು ಹೇಳುತ್ತಾರೆ.

ಬಾಗಲಕೋಟೆಯಲ್ಲಿ ಹಳೆಪೇಟೆ, ಹೊಸಪೇಟೆ, ಜೈನಪೇಟೆ ಎಂಬ ಮೂರು ಮುಖ್ಯ ಪೇಟೆಗಳಿರುತ್ತವೆ. ಹಳೆಪೇಟೆಯು ಪುರಾತನಕಾಲದ್ದು. ಜೈನಪೇಟೆ ಯನ್ನು ಸವಣೂರ ನವಾಬನ ಆಳಿಕೆಯಲ್ಲಿ (೧೬೬೪—೧೭೫೫) ಕಟ್ಟಿಸಿದರು. ೧೭೯೧ರಲ್ಲಿ ಜೈನರಿಗೂ ಲಿಂಗವಂತರಿಗೂ ಜಗಳ ಹುಟ್ಟಿದ್ದರಿಂದ ಲಿಂಗವಂತರು ಹೊಸಪೇಟೆಯನ್ನು ಕಟ್ಟಿಸಿದರು. ಇವುಗಳ ಹೊರತು ತೌಲಪೇಟೆ ಎಂಬ ಭಾಗವು ಆನಂದರಾವ ರಾಸ್ತೆ ಇವನ ಕಾಲದಲ್ಲಿ ಒಕ್ಕಲಾಯಿತು. ರಾಸ್ತೆ ಯವರ ಆಳಿಕೆಯಲ್ಲಿ ಇಲ್ಲಿ ಟಂಕಸಾಲೆ ಇತ್ತು. ಗೋಪಾಳಪುರವೆಂಬ ಭಾಗವು ೧೮೩೫ರಲ್ಲಿ ಉಂಟಾಯಿತು. ವೆಂಕಟಪುರವೆಂಬ ಪೇಟೆಯನ್ನು ರಾವ ಬಹದ್ದೂರ ತಿರುಮಲರಾಯರು ಸನ್ ೧೮೫೬ರಲ್ಲಿ ಸ್ಥಾಪಿಸಿದರು.

ಬದಾಮಿ (ಸ. ಸ. ಎತ್ತರ ೧೯೩೧'). — ಉತ್ತರ ಅಕ್ಷಾಂಶ ೧೫°, ೫೫'. ಪೂರ್ವರೇಖಾಂಶ ೭೫°, ೪೫'. ವಿಜಾಪುರದ ದಕ್ಷಿಣಕ್ಕೆ ೬೫ ಮೈಲಿನ ಮೇಲೆ ಇರುವದು. ಇದು ತಾಲೂಕಿನ ಮುಖ್ಯಸ್ಥಳವಿದ್ದು ಉಗಿಬಂಡಿಯ ಸ್ಟೇಶನು ೩ ಮೈಲಿನ ಮೇಲಿರುವದು.

ಈ ಊರು ಎರಡು ಗುಡ್ಡಗಳ* ನಡುವಿನ ಕಂದರದಲ್ಲಿ ಇರುವದು
ಒಂದು ಗುಡ್ಡದ ಬುಡದಿಂದ ಮತ್ತೊಂದರ ವರೆಗೆ ಒಡ್ಡು ಹಾಕಿ ದೊಡ್ಡದೊಂದ
ಕೆರೆಯನ್ನು ಮಾಡಿರುತ್ತಾರೆ. ಈ ಕೆರೆಯ ಉತ್ತರ ದಂಡೆಗುಂಟ ಗುಡಿಗಳಿರ
ತ್ತವೆ. ಗುಡ್ಡಗಳ ಮೇಲೆ ಎರಡು ದುರ್ಗಕೋಟೆಗಳುಂಟು. ದಕ್ಷಿಣ
ಕೋಟೆಯ ಪಶ್ಚಿಮ ಭಾಗದಲ್ಲಿ ಬಂಡೆಯೊಳಗೆ ಕೊರೆದು ಮಾಡಿದ ನಾಲ
ಗುಡಿಗಳಿರುತ್ತವೆ. ಇವು ಬಹಳ ವಿಶಾಲವಾಗಿರುವವು. ಸಾಧಾರಣವಾ
ಪ್ರತಿಯೊಂದರ ಮುಂದೆ ಒಂದು ಪಡಸಾಲೆಯೂ, ಅದರ ಹಿಂದೆ ಒಂದು ಸಭ
ಮಂಟಪವೂ, ಅದಕ್ಕೂ ಹಿಂದೆ ಗರ್ಭಾಗಾರವೂ ಇರುವವು. ಪ್ರತಿಯೊಂದ
ವಿಭಾಗದಲ್ಲಿ ಒಳ್ಳೇ ಸುಂದರವಾದ ಮೂರ್ತಿಗಳನ್ನು ಕಟೆದಿದ್ದಾರೆ. ಅಲ್ಲದ
ಪ್ರಾಚೀನ ಕಾಲದಲ್ಲಿ ಕರ್ನಾಟಕವನ್ನು ಆಳಿದ ಪಲ್ಲವರು, ಚಾಲುಕ್ಯರು
ವಿಜಯನಗರದವರು ಬರೆಯಿಸಿದ ಸಂಸ್ಕೃತ, ಕನ್ನಡ ಶಿಲಾಲೇಖಗಳು ಹ
ವಿರುತ್ತವೆ.

ಇದಕ್ಕೆ ಮೊದಲು ವಾತಾಪಿಪುರವೆಂದು ಅನ್ನುತ್ತಿದ್ದರು. ಇಲ್ಲಿಯ
ಸಮೀಪದಲ್ಲಿ ೩ ಮೈಲಿನ ಮೇಲೆ ಬನಶಂಕರಿ ಎಂಬ ಪ್ರಸಿದ್ಧ ದೇವಸ್ಥಾನವಿರ
ವದು. ಅಲ್ಲಿ ಪ್ರತಿವರ್ಷ ಪುಷ್ಯ ಶು|| ಹುಣ್ಣಿವೆಗೆ ಜಾತ್ರೆಯಾಗುತ್ತದೆ. ಗುಡ್ಡ
ಮೇಲೆ ಮಹಾ ಕೂಟೇಶ್ವರನ ದೇವಸ್ಥಾನವೂ ಕೋಟಿಲಿಂಗಗಳೂ ಇರುವವು
ಇದಕ್ಕೆ 'ದಕ್ಷಿಣ ಕಾಶಿ' ಎಂದು ಹೇಳುವರು. 'ಶಿವಯೋಗ ಮಂದಿರ'ವೆಂ
ಯೋಗಿಗಳ ವಾಸಸ್ಥಳವು ಮಹಾಕೂಟದ ಸಮೀಪದಲ್ಲಿಯೇ ಇರುವದು.

ಇತಿಹಾಸ.—ಬದಾಮಿಯು ಸುಮಾರು ಎರಡು ಸಾವಿರ ವರ್ಷಗಳಿಂ
ಹೆಸರಾಗಿರುತ್ತದೆ. ಇಲ್ಲಿ ಆಳಿದ ಮೊದಲನೇ ರಾಜವಂಶವು ಪಲ್ಲವರದು
ಇದಕ್ಕೂ ಪೂರ್ವದಲ್ಲಿ ಕೆಲವು ರಾಜವಂಶಗಳು ಆಳಿರಬಹುದೆಂದು ಅನುಮಾ
ವಿದೆ. ಚಾಲುಕ್ಯರ ೨ನೇ ಪುಲಿಕೇಶಿಯು ಬದಾಮಿಯನ್ನು ಪಲ್ಲವರ ಕೈಯಿಂ
೬ನೇ ಶತಮಾನದ ಪ್ರಾರಂಭದಲ್ಲಿ ಕಸುಕೊಂಡು ತನ್ನ ರಾಜಧಾನಿಯನ್ನಾ
ಮಾಡಿಕೊಂಡನು. ಚಾಲುಕ್ಯರನ್ನು ರಾಷ್ಟ್ರಕೂಟದವರು ಮುರಿದರು. ತರ
ವಾಯ ಬದಾಮಿಯು ದೇವಗಿರಿಯ ಯಾದವರ ಕೈಸೇರಿತು. ಬಳಿಕ ಈ
ಪಟ್ಟಣವು ವಿಜಾಪುರದವರ ಅಧೀನಕ್ಕೆ ಬಂತು. ಅನಂತರ ವಿಜಯನಗರದವ
ಕೈಸೇರಿ ಅದು ಹಾಳಾದ ಬಳಿಕ ಪುನಃ ವಿಜಾಪುರದ ಅಧೀನಕ್ಕೆ ಬಂತು. ಅಲ್ಲಿಂ

* ಬದಾಮಿಯ ಗುಡ್ಡದ ಎತ್ತರ ಸ. ಸ. ೨೩೦೦'.

ಸವಣೂರ ನವಾಬನ ಅಧೀನಕ್ಕೆ ಬಂದು, ಅವನಿಂದ ೧೭೪೬ರಲ್ಲಿ ಪೇಶವನಿಗೆ ಕೊಡಲ್ಪಟ್ಟಿತು. ಪೇಶವೆಯಿಂದ ರಾಸ್ತೆ ಎಂಬ ಸರದಾರನಿಗೆ ದೊರೆತು, ಪೇಶವೆ ರಾಜ್ಯವು ಹಾಳಾದನಂತರ ಈ ಪಟ್ಟಣವು ಇಂಗ್ಲಿಷರ ಕೈಸೇರಿತು.

ಬಾಗೇವಾಡಿ (ಸ. ಸ. ಎತ್ತರ ೨೦೪೪′).—ವಿಜಾಪುರದ ಆಗ್ನೇಯಕ್ಕೆ ೨೫ ಮೈಲಿನ ಮೇಲೆ ಇದೆ. ಇದಾದರೂ ತಾಲೂಕಿನ ಮುಖ್ಯ ಗ್ರಾಮವು. ಇಲ್ಲಿ ಪುರಾತನ ಕಾಲದ ಎಷ್ಟೋ ಗುಡಿಗಳುಂಟು. ಕೆಲವು ಕಡೆ ಶಿಲಾಲಿಪಿಗಳುಂಟು. ಈ ಊರಲ್ಲಿ ಲಿಂಗವಂತ ಧರ್ಮಸ್ಥಾಪಕನಾದ ಬಸವೇಶ್ವರನು ಹುಟ್ಟಿದನೆಂದು ಹೇಳುತ್ತಾರೆ. ಅದರಿಂದ ಇದಕ್ಕೆ ಬಸವನ ಬಾಗೇವಾಡಿ ಎಂಬ ಹೆಸರು ಬಂದಿದೆ.

ಬಾಗೇವಾಡಿಗೆ ಮೊದಲು ಭೋಗವತಿ ಎಂದು ಹೆಸರಿತ್ತು. ಚಾಲುಕ್ಯರ ಆಳಿಕೆಯಲ್ಲಿ ಇಲ್ಲಿ ಒಬ್ಬ ಮಾಂಡಲಿಕನಿರುತ್ತಿದ್ದನು.

ಬೀಳಗಿ (ಸ. ಸ. ಎತ್ತರ ೧೮೪೩′).—ಬಾಗಲಕೋಟೆಯ ವಾಯವ್ಯಕ್ಕೆ ೧೨ ಮೈಲಿನ ಮೇಲೆ ಇರುತ್ತದೆ. ಈ ಊರಲ್ಲಿ ಸುಮಾರು ೩೦೦ ವರ್ಷಗಳ ಹಿಂದೆ ಕಟ್ಟಿಸಿದಂಥ ಗುಡಿಗಳೂ ಜಲಾಶಯಗಳೂ ಇರುತ್ತವೆ. ಊರ ಹೊರಗೆ 'ಆರೆತ್ತಿನ ಭಾವಿ' ಎಂಬ ಭಾವಿಯು ೧೫೦ ಫೂಟು ಉದ್ದ, ೭೫ ಫೂಟು ಅಗಲ ಇರುತ್ತದೆ. ಈ ಭಾವಿಯೊಳಗೆ ಈಶ್ವರನ ಗುಡಿಯುಂಟು. ಅದರಲ್ಲಿ ಕನ್ನಡ, ಮರಾಠಿ, ಪರ್ಶಿಯನ್ ಲಿಪಿಗಳಿವೆ. ಇವುಗಳಿಂದ ಈ ಭಾವಿಯನ್ನು ಮಾಥವಜೀ ವಿಸಾಜೀ ಎಂಬವನು ಸನ್ ೧೭೦೮ರಲ್ಲಿ ಕಟ್ಟಿಸಿದನೆಂದು ತಿಳಿಯುತ್ತದೆ. ಊರೊಳಗೆ ರಾಯರ ಭಾವಿಯಲ್ಲಿಯೂ ಇಂಥ ಲಿಪಿಗಳಿವೆ. ಊರ ಹೊರಗೆ ಒಂದು ಮೈಲಿನ ಮೇಲೆ ಸಿದ್ಧೇಶ್ವರನ ಗುಡಿಯುಂಟು. ಅದರ ಬಳಿಯಲ್ಲಿಯ ಹೊಂಡದಲ್ಲಿ ಗುಡ್ಡದೊಳಗಿಂದ ನೀರು ಹರಿದುಬಂದು ಬೀಳುತ್ತದೆ. ಸಿದ್ಧೇಶ್ವರನ ಮುಂದಿನ ದೀಪಮಾಲೆಯ ಕಂಬವು ೩೦ ಫೂಟು ಉದ್ದವಾದ ಅಖಂಡವಾದ ಕಲ್ಲಿನಿಂದ ಮಾಡಿದ್ದಿರುತ್ತದೆ. ಅದರ ಬುಡದಲ್ಲಿ ಸನ್ ೧೫೫೫ನೆಯ ವರ್ಷದ ಒಂದು ಲಿಪಿಯುಂಟು. ಈ ಊರಲ್ಲಿ ಮಹಾಲಕಚೇರಿ ಇರುವದು.

ಬೇಲೂರು (ಸ. ಸ. ಎತ್ತರ ೧೮೩೩′).—ಬದಾಮಿಯ ಆಗ್ನೇಯಕ್ಕೆ ೭ ಮೈಲಿನ ಮೇಲೆ ಇರುತ್ತದೆ. ಕೋಟೆಯೊಳಗೆ ನಾರಾಯಣ ಗುಡಿಯಲ್ಲಿಯೂ ಹನುಮಂತ ದೇವರ ಗುಡಿಯಲ್ಲಿಯೂ ೧೦ನೇ ೧೧ನೇ ಶತಕಗಳ ಚಾಲುಕ್ಯರ

ಲಿಪಿಗಳಿವೆ. ಈ ಊರಲ್ಲಿ ಉರುಟು ಬಟ್ಟೆಗಳೂ ಜೋಡುಗಳೂ ಮಣ್ಣಿ
ಪಾತ್ರೆಗಳೂ ಆಗುತ್ತವೆ.

ಬಬಲೇಶ್ವರ (ಸ. ಸ. ಎತ್ತರ ೧೬೬೫').—ವಿಜಾಪುರದ ನೈಋತ್ಯ
೧೫ ಮೈಲಿನ ಮೇಲೆ ಇರುತ್ತದೆ. ಈ ಊರು ಇದ್ದ ಸ್ಥಳದಲ್ಲಿ ಮೊದ
ಜಾಲಿಯ ದೊಡ್ಡ ಬನವಿತ್ತು. ಅದು ಕಳ್ಳರಿಗೆ ಆಶ್ರಯವಾಗಿ ಸುತ್ತಲಿನ ಗ್ರಾ
ಗಳಿಗೆ ಬಹಳ ಉಪದ್ರವವಾಗಲು, ಸುತ್ತಲಿನ ಏಳು ಹಳ್ಳಿಗಳ ಜನರು ಕೂ
ಜಾಲಿಯನ್ನು ಕಡಿದು ಈ ಊರನ್ನು ಸ್ಥಾಪಿಸಿದರು. ಜಂಗಮಸೆಟ್ಟಿ ಮ
ಲಿಂಗಪ್ಪನೆಂಬವನು ೧೭೮೦ರಲ್ಲಿ ಈ ಊರನ್ನು ಕಟ್ಟಿಸಿದನು. ಮೊದಲು ಜಾ
ಯೊಳಗಿದ್ದ ಈಶ್ವರನಿಗಾಗಿ ಒಂದು ದೊಡ್ಡ ಗುಡಿಯನ್ನು ಕಟ್ಟಿ ಈಶ್ವರ
ಸ್ಥಾಪನೆ ಮಾಡಿದ್ದಾನೆ. ಊರ ಹೊರಗೆ ಅಂಬಲಿಮುತ್ತಪ್ಪನೆಂಬವನ ದೇ
ಸ್ಥಾನವು ಮಸೀದೆಯ ಹಾಗೆ ಇರುತ್ತದೆ. ಅದರಲ್ಲಿ ಯಾವ ಮೂರ್ತಿಯ
ಇಲ್ಲ.

ಚಟ್ಟರಕಿ (ಸ. ಸ. ಎತ್ತರ ೧೬೪೨').—ಸಿಂದಗಿಯ ಪಶ್ಚಿಮಕ್ಕೆ ೧೦ ಮೈ
ಲಿನ ಮೇಲೆ ಇರುತ್ತದೆ. ಇಲ್ಲಿ ದತ್ತಾತ್ರಯನ ಗುಡಿಯ ಒಳಗೂ ಹೊರಗ
ನಾನಾ ಪ್ರಕಾರದ ಮೂರ್ತಿಗಳೂ ಕಲ್ಲಿನ ಆನೆ, ಸಿಂಹ ಮುಂತಾದ ಗೊಂ
ಗಳೂ ಇರುತ್ತವೆ. ಈ ಗುಡಿಯಲ್ಲಿ ಸವೆದದ್ದೊಂದು ಲಿಪಿಯುಂಟು. ಅದ
ಓದಲಿಕ್ಕೆ ಬರುವ ಹಾಗಿಲ್ಲ.

ಚಿಮ್ಮಲಗಿ (ಸ. ಸ. ಎತ್ತರ ೧೬೭೮').—ಕೃಷ್ಣಾ ಘಟಪ್ರಭೆಗಳ ಸಂಗ
ಸ್ಥಳದಿಂದ ನಾಲ್ಕು ಮೈಲಿನ ಮೇಲೆ ಇರುತ್ತದೆ. ಇದು ಕ್ಷೇತ್ರವೆನಿಸುತ್ತ
ಊರೊಳಗೂ ಹೊರಗೂ ಕೂಡಿ ೧೦೮ ಲಿಂಗಗಳಿರುತ್ತವೆಂದು ಹೇಳುತ್ತಾ
ಇಲ್ಲಿ ಓದಲಿಕ್ಕೆ ಬಾರದಂಥ ಕನ್ನಡ ಮೂರು ಲಿಪಿಗಳಿರುತ್ತವೆ.

ಚೊಳಚ ಗುಡ್ಡ (ಸ. ಸ. ಎತ್ತರ ೧೮೪೬').—ಬಾದಾಮಿಯ ದಕ್ಷಿಣ
೪ ಮೈಲಿನ ಮೇಲೆ ಇದೆ. ಇಲ್ಲಿಯ ಬನಶಂಕರಿಯ ಗುಡಿಯು ಹೆಸರಾದದ್ದು
ಹಳೇ ಗುಡಿಯು ಅರ್ಧಮರ್ಧ ನೆಲದೊಳಗೆ ಹುಗಿದಿದೆ. ಹೊಸ ಗುಡಿಯನ್ನು ಕ
ಕಲ್ಲಿನಿಂದ ಸಾತಾರೆಯ ಪರಶುರಾಮ ನಾಯಿಕ ಅಗಳೆ ಈತನು ಸನ್ ೧೭೫
ಸುಮಾರಿನಲ್ಲಿ ದೇವಿಯ ಅಪ್ಪಣೆಯಿಂದ ಕಟ್ಟಿಸಿದನಂತೆ. ಹಳೆ ಗುಡಿಯ
ದಕ್ಷಿಣ ದೇಶದ ಪದ್ಧತಿಯದಿರುತ್ತದೆ. ಅದರ ಸಭಾಮಂಟಪದ ಛಾವಣಿಯ
೭-ಲನೇ ಶತಕದಲ್ಲಿ ಆದದ್ದೆಂದು ತೋರುತ್ತದೆ. ಹೊಸ ಗುಡಿಯ ಮೇಲೆ ಶಿ

ವನ್ನು ಕಟ್ಟಿ ಮೇಲೆ ಗುಮುಟವನ್ನು ಮಾಡಿದ್ದಾರೆ. ಗುಡಿಯ ಸುತ್ತುಮುತ್ತು ಧರ್ಮಶಾಲೆಗಳಿರುತ್ತವೆ. ಈ ಗುಡಿಯ ಮುಂದೆ ಒಂದು ಹೊಂಡವಿರುತ್ತದೆ. ಆದು ೩೬೨ ಫೂಟು ಚಚ್ಚೌಕು ಇರುತ್ತದೆ. ಪರಮಾವಧಿ ಆಳವು ೨೫ ಫೂಟು. ಇದಕ್ಕೆ ಪೂರ್ವದಲ್ಲಿ 'ಹರಿಶ್ಚಂದ್ರ ತೀರ್ಥ'ವೆನ್ನುತ್ತಿದ್ದರು. ಈ ಹೊಂಡಕ್ಕೆ ನಾಲ್ಕೂ ದಿಕ್ಕುಗಳಲ್ಲಿ ಭದ್ರವಾದ ಕಲ್ಲಿನ ಗೋಡೆಗಳನ್ನು ಶಂಕರಸೆಟ್ಟಿ, ಚಂದ್ರ ಸೆಟ್ಟಿ ಎಂಬವರಿಬ್ಬರು ಜೈನರು ಸನ್ ೧೬೮೦ರ ಸುಮಾರಿನಲ್ಲಿ ಕಟ್ಟಿಸಿದರೆಂದು ಹೇಳುತ್ತಾರೆ. ಪೂರ್ವದಿಕ್ಕಿನ ಗೋಡೆಯಲ್ಲಿ ನೀರು ಹರಿದುಹೋಗಲಿಕ್ಕೆ ಮೂರು ಮಾರ್ಗಗಳನ್ನು ಮಾಡಿದ್ದಾರೆ. ಹೊಂಡದ ಪಶ್ಚಿಮದ ಗೋಡೆಯ ಮೇಲೆ ೨೪ ಕಂಬಗಳುಳ್ಳದ್ದೊಂದು ದೊಡ್ಡ ಮಂಟಪವಿದೆ. ಅದರ ಬಳಿಯಲ್ಲಿ ಒಂದು ದೀಪಸ್ತಂಭವಿದೆ. ಬನಶಂಕರಿಯ ಎದುರಿಗೂ ಬಲಗಡೆಯಲ್ಲಿಯೂ ಎರಡು ಸೆಲೆಗಳಿರುತ್ತವೆ. ಗುಡಿಯ ಪೂರ್ವ ಉತ್ತರ ದಿಕ್ಕುಗಳಲ್ಲಿ ಅರಸಿನ ಗೊಂಡ, ಎಣ್ಣೆಗೊಂಡ ಎಂಬೆರಡು ಕುಂಡಗಳಿವೆ. ಗುಡಿಯ ಉತ್ತರ ದ್ವಾರದ ಹೊರಗೆ ಬಹು ಸುಂದರವಾದ ಒಂದು ರಥವು ಇರುತ್ತದೆ.

ಧೂಳಖೇಡ (ಸ. ಸ. ಎತ್ತರ ೧೫೮೫′).— ಇಂಡಿಯ ವಾಯುವ್ಯಕ್ಕೆ ೧೫ ಮೈಲಿನ ಮೇಲೆ ಭೀಮಾ ತೀರದಲ್ಲಿದೆ. ಇದು ಕ್ಷೇತ್ರವೆನಿಸಿಕೊಳ್ಳುತ್ತದೆ. ಇಲ್ಲಿಯ ಶಂಕರಲಿಂಗವನ್ನು ಬ್ರಹ್ಮದೇವರು ಸ್ಥಾಪಿಸಿದ್ದಾನೆಂದು ಹೇಳುವರು. ಈ ಗುಡಿಯಲ್ಲಿ ಒಂದು ಲಿಪಿಯುಂಟು.

ದೇವಣಗಾವ (ಸ. ಸ. ಎತ್ತರ ೧೪೦೦′).— ಸಿಂದಗಿಯ ಈಶಾನ್ಯಕ್ಕೆ ೧೮ ಮೈಲಿನ ಮೇಲೆ ಭೀಮೆಯ ದಂಡೆಯಲ್ಲಿ ಇರುತ್ತದೆ. ಇದನ್ನು ದೇವಣಭಟ್ಟ ನೆಂಬ ಬ್ರಾಹ್ಮಣನು ಸ್ಥಾಪಿಸಿದನೆಂದು ಹೇಳುತ್ತಾರೆ. ಇಲ್ಲಿ ಕಲಮೇಶ್ವರ, ಮಲ್ಲಿ ಕಾರ್ಜುನ; ಶಂಕರಲಿಂಗ ಎಂಬ ಗುಡಿಗಳಿರುತ್ತವೆ.

ದೇವರನಾವದಗಿ (ಸ. ಸ. ಎತ್ತರ ೧೪೦೬′).— ಸಿಂದಗಿಯ ಈಶಾನ್ಯಕ್ಕೆ ೧.೨ ಮೈಲಿನ ಮೇಲೆ ಇದೆ. ಪುಣೆಯ ಪೊಲೀಸ ಸುಪರಿಂಟೆಂಡೆಂಟನೂ ನಿಜಾಮ ಇಲಾಖೆಯ ಪೊಲೀಸ ಕಮಿಶನರನೂ ಕೂಡಿ ಸನ್ ೧೮೭೯ನೇ ಇಸವಿಯ ಜುಲಾಯಿ ತಿಂಗಳಿನ ೨೧ನೇ ತಾರೀಖಿನ ದಿವಸ ರಾತ್ರಿಯಲ್ಲಿ ವಾಸುದೇವ ಬಳ ವಂತ ಫಡಕೆ ಎಂಬ ದಾಳಿಗಾರನನ್ನು ಇಲ್ಲಿಯ ಗುಡಿಯಲ್ಲಿ ಮಲಗಿದ್ದಾಗ್ಗೆ ಹಿಡಿದರು.

ಗಲಗಲಿ (ಸ. ಸ. ಎತ್ತರ ೧೬೧೪′).— ಕಲಾದಗಿಯ ಉತ್ತರಕ್ಕೆ ೧೪ ಮೈ

ಲಿನ ಮೇಲೆ ಕೃಷ್ಣೆಯ ದಂಡೆಯಲ್ಲಿ ಇದೆ. ಇದಕ್ಕೆ ಗಾಲವಕ್ಷೇತ್ರವೆನ್ನುವರು
ಕೃಷ್ಣೆಯ ದಂಡೆಯಲ್ಲಿ ಸ್ವಲ್ಪ ಎತ್ತರವಾದ ಬಂಡೆಯಲ್ಲಿ ಸುಮಾರು ೫ ಫೂಟ
ಎತ್ತರವುಳ್ಳ ಕಮಾನಿನಂಥ ಏಳು ಗೂಡುಗಳಿರುತ್ತವೆ. ಅವು ಗಾಲ
ಮುಂತಾದ ಏಳು ಋಷಿಗಳ ಸ್ಥಾನಗಳೆಂದು ತೋರಿಸುತ್ತಾರೆ. ಊರಿನ ಉತ್ತ
ರಕ್ಕೆ ಒಂದೂವರೆ ಮೈಲಿನ ಮೇಲೆ ಹೊಳೆಯ ಪ್ರವಾಹದ ಕೆಳಗೆ ದೊಡ್ಡದೊಂದ
ಗುಡಿ ಇರುತ್ತದೆಂತಲೂ ಸನ್ ೧೮೭೬-೭೭ನೇ ವರ್ಷ ಹೊಳೆಯ ನೀರು ಬಹಳ
ಕಡಿಮೆಯಾದ್ದರಿಂದ ೯೦ ಫೂಟು ಚಚ್ಚೌಕಾದ ಆ ಗುಡಿಯ ಭಾಗವು ಕಾಣಿಸ
ತ್ತಿತ್ತೆಂತಲೂ ಹೇಳುತ್ತಾರೆ. ಔರಂಗಜೇಬನು ಸನ್ ೧೬೮೯ರಲ್ಲಿ ಸಂಭಾಜ
ಯನ್ನು ಕೊಂದ ಬಳಿಕ ಈ ಊರಲ್ಲಿ ತನ್ನ ವಿಸ್ತಾರವಾದ ದಂಡಿನೊಡನೆ ಇಳ
ಕೊಂಡಿದ್ದನಂತೆ. ಆ ದಂಡು ೩೦ ಮೈಲು ವಿಸ್ತಾರವಾಗಿ ಹಬ್ಬಿತ್ತು.

ಗುಳೇದಗುಡ್ಡ* (ಸ. ಸ. ೧೭೪೫′).— ಈ ಊರು ಬಾದಾಮಿಯ ಈಶಾ
ನ್ಯಕ್ಕೆ ೧೫ ಮೈಲಿನ ಮೇಲೆ ಇರುತ್ತದೆ. ಈ ಊರಲ್ಲಿ ೫೦೦ ಮಗ್ಗಗಳಿರುತ್ತವೆ
ಅವುಗಳಲ್ಲಿ ಉತ್ತಮ ಖಣಗಳು ಹುಟ್ಟುತ್ತವೆ. ಇಲ್ಲಿ ಜರ್ಮನ್ ಮಿಶನರಿಗಳ
ಠಾಣ್ಯವಿರುತ್ತದೆ. ಇಲ್ಲಿಯ ಕೋಟೆಯನ್ನು ವಿಜಾಪುರದ ಸರದಾರನಾದ
ಸಿಂಗಪ್ಪನಾಯಿಕ ದೇಸಾಯಿ ಎಂಬವನು ಸನ್ ೧೬೨೭ರಲ್ಲಿ ಕಟ್ಟಿಸಿದನು.

ಗುಡೂರು (ಸ. ಸ. ಎತ್ತರ ೧೮೦೫′).— ಹುನಗುಂದದ ನೈಋತ್ಯಕ್ಕೆ ೧
ಮೈಲಿನ ಮೇಲೆ ಇರುತ್ತದೆ. ಇಲ್ಲಿ ಕುಪ್ಪಸದ ಖಣಗಳು ಹುಟ್ಟುತ್ತವೆ. ಇಲ್ಲಿ
ತಾಮ್ರ ಹಿತ್ತಾಳಿಗಳ ಪಾತ್ರೆಗಳೂ ಮೂರ್ತಿಗಳೂ ತಯಾರು ಆಗುತ್ತವೆ.

ಗೋಲಗೇರಿ (ಸ. ಸ. ಎತ್ತರ ೧೬೪೩′).— ಸಿಂದಗಿಯ ಆಗ್ನೇಯಕ್ಕೆ ೧
ಮೈಲಿನ ಮೇಲೆ ಇದೆ. ಈ ಗ್ರಾಮವನ್ನು ೧೪ನೇ ಶತಮಾನದಲ್ಲಿ ಒಬ್ಬ ಕುರು
ಬನು ತನ್ನ ಕುರಿಗಳ ದಡ್ಡಿ ಇದ್ದ ಸ್ಥಳದಲ್ಲಿ ಕಟ್ಟಿಸಿದನೆಂದು ಹೇಳುತ್ತಾರೆ
ಅವನು ಶ್ರೀಶೈಲದ ಜಾತ್ರೆಗೆ ಹೋಗುವ ಜನರಿಗೆ ಅತ್ತಕಡೆಯಿಂದ ಒಂದು
ಲಿಂಗವನ್ನು ತಂದು ಕೊಡಿರೆಂದು ಹೇಳಿಕೊಂಡದ್ದಕ್ಕೆ ಆ ಜನರು ಚೇಷ್ಟೆಯಿಂದ
ಒಂದು ಕುರಿಯ ಹಿಕ್ಕಿಯನ್ನು ತಂದು ಕೊಟ್ಟರಂತೆ! ಕುರುಬನು ಗುಡಿಯನ್ನು
ಕಟ್ಟಿಸಿ, ಅದರಲ್ಲಿ ಆ ಹಿಕ್ಕಿಯನ್ನು ಲಿಂಗವೆಂದು ಸ್ಥಾಪಿಸಿ ಬಹು ಭಕ್ತಿಯಿಂದ
ಅದನ್ನು ಆರಾಧಿಸುತ್ತಿರಲಾಗಿ ಹಿಕ್ಕಿಯು ನಿಜವಾಗಿ ಲಿಂಗವೇ ಆಯಿತೆಂದು
ಹೇಳುತ್ತಾರೆ. ಇಲ್ಲಿ ಪ್ರತಿವರ್ಷ ಜಾತ್ರೆಯಾಗುತ್ತದೆ.

---

* ಗುಳೇದಗುಡ್ಡ (ಸ. ಸ. ಎತ್ತರ ೨೨೭೬′).

ಹುನಗುಂದ (ಸ. ಸ. ಎತ್ತರ ೧೬೬೬').—ವಿಜಾಪುರದ ಆಗ್ನೇಯಕ್ಕೆ ೬೦ ಮೈಲಿನ ಮೇಲೆ ಇದೆ. ತಾಲೂಕಿನ ಮುಖ್ಯ ಸ್ಥಳವು. ಊರ ಬಳಿಯಲ್ಲಿ ಗುಡ್ಡದ* ಮೇಲೆ ಮೇಗುಡಿ ಎಂಬ ಜೈನ ಗುಡಿಯು ಹಾಳಾದದ್ದಿರುವದು. ಈ ಗುಡಿಯೊಳಗಿನ ಬಹು ಸುಂದರವಾದ ಚಿತ್ರ ಕೊರೆದಂಥ ಕಂಬ ಮುಂತಾದ ಕಲ್ಲುಗಳನ್ನು ಒಯಿದು ಬಾವಿಗಳಿಗೆ ಹಾಕಿದ್ದಾರೆ. ಹಳೇ ಕಚೇರಿಯ ಬಳಿಯಲ್ಲಿ ಬಂಡೆಯೊಳಗೆ ಕೊರೆದು ಮಾಡಿದ್ದೊಂದು ಗವಿಯುಂಟು. ಊರೊಳಗೆ ರಾಮಲಿಂಗನ ಗುಡಿಯಲ್ಲಿ ಬಲ್ಲಾಳನ ಮನೆತನದ ಅಯ್ಯನೆಂಬವನೋರ್ವನು ಬರೆಯಿಸಿದ ಲಿಪಿಯುಂಟು.

ಹಳ್ಳೂರು (ಸ. ಸ. ಎತ್ತರ ೧೮೦೮').—ಬಾಗಲಕೋಟಿಯ ಪೂರ್ವಕ್ಕೆ ೯ ಮೈಲಿನ ಮೇಲೆ ಇರುತ್ತದೆ. ಇಲ್ಲಿಯ ಬಸವೇಶ್ವರನ ಗುಡಿಯನ್ನು ಚೋಳ ಅರಸರು (ಚಾಲುಕ್ಯರ ಪೂರ್ವದವರು) ಕಟ್ಟಿಸಿದ್ದಾರೆಂದು ಹೇಳುತ್ತಾರೆ. ಇದರಲ್ಲಿಯ ಬಸವೇಶ್ವರನ ಮೂರ್ತಿಯು ಬಹು ದೊಡ್ಡದಿರುತ್ತದೆ. ಈ ಗುಡಿಯ ಹತ್ತರ ಒಂದು ಹೊಂಡವೂ, ಒಂದು ಬಾವಿಯೂ ಉಂಟು. ಊರ ಹೊರಗೆ ಗುಡ್ಡದ ಮೇಲಿರುವ ಈಶ್ವರನ ಗುಡಿಯಲ್ಲಿ ಎಂಟು ಜೈನ ತೀರ್ಥಂಕರರ ಮೂರ್ತಿಗಳಿವೆ. ಅವುಗಳಲ್ಲಿ ಕೆಲವು ಒಡೆದಿರುತ್ತವೆ. ಮಾರ್ಗಶೀರ್ಷದಲ್ಲಿ ಬಸವೇಶ್ವರನ ಜಾತ್ರೆಯಾಗುತ್ತದೆ. ಈ ಊರಲ್ಲಿ ಎರಡು ಸವಿದಂಥ ಕನ್ನಡ ಲಿಪಿಗಳಿರುತ್ತವೆ.

ಹಲಸಂಗಿ (ಸ. ಸ. ಎತ್ತರ ೧೪೭೦').—ಇಂಡಿಯ ವಾಯವ್ಯಕ್ಕೆ ೧೨ ಮೈಲಿನ ಮೇಲೆ ಇರುತ್ತದೆ. ವಿಜಾಪುರದ ಮಹಮೂದಶಹನು ಇದನ್ನು ತನ್ನ ವಜೀರನಿಗೆ ಜಹಾಗೀರು ಹಾಕಿಕೊಟ್ಟಿದ್ದನು. ಆ ವಜೀರನು ಕಟ್ಟಿಸಿದ ಕೋಟೆಯಲ್ಲಿ ಇರುವ ದಾದೇಸಾಹೇಬ ಎಂಬ ಪೀರನ ಜಾತ್ರೆಯು ಪ್ರತಿವರ್ಷ ಆಗುತ್ತದೆ.

ಇಂಡಿ (ಸ. ಸ. ಎತ್ತರ ೧೫೦೪').—ವಿಜಾಪುರದ ಈಶಾನ್ಯಕ್ಕೆ ೩೦ ಮೈಲಿನ ಮೇಲೆ ಅದೆ. ಇದು ತಾಲೂಕಿನ ಮುಖ್ಯ ಸ್ಥಳವು. ಈ ಊರಿಗೆ ಬುನಾದಿಯಲ್ಲಿ ಪಯಕ್ಷೇತ್ರವೆಂದು ಹೆಸರಿತ್ತು. ಹಿರೇ ಇಂಡಿಯು ಸುಮಾರು ಒಂದು ಮೈಲಿನ ಮೇಲೆ ಇತ್ತೆಂದು ತೋರುತ್ತದೆ. ಈ ಗುಡಿಯ ಹತ್ತರ ಒಂದು ಕನ್ನಡ ಲಿಪಿಯುಂಟು. ಸಾಲೋಟಗಿಯಿಂದ ತಂದ ಇನ್ನೊಂದು ಲಿಪಿಯ ಕಲ್ಲು

* ಹುನಗುಂದ ಗುಡ್ಡ (ಸ. ಸ. ಎತ್ತರ ೧೯೬೦').

ಪೊಲೀಸ ಕಚೇರಿಯ ಬಳಿಯಲ್ಲಿ ಇರುತ್ತದೆ. ಅದರ ಮೂರು ಮಗ್ಗಲುಗಳ
ಮೇಲೆ ದೇವನಾಗರಿ ಲಿಪಿಯೂ ಒಂದು ಮಗ್ಗಲಿಗೆ ಕನ್ನಡ ಲಿಪಿಯೂ ಉಂಟು

ಇಂಗಳೇಶ್ವರ (ಸ. ಸ. ಎತ್ತರ ೨೧೦೮'). — ಬಾಗೇವಾಡಿಯ ಈಶಾನ್ಯಕ್ಕೆ
೬ ಮೈಲಿನ ಮೇಲೆ ಇರುತ್ತದೆ. ೧೨ನೇ ಶತಮಾನದಲ್ಲಿ ಕಟ್ಟಿಸಿದ ಮೂರು ಗುಡಿ
ಗಳಿರುತ್ತವೆ. ಊರ ಹೊರಗೆ ಗುಡ್ಡದೊಳಗೆ ಕೊರೆದ ಎರಡು ಗುಡಿಗಳುಂಟು

ಇಲಕಲ್ಲು (ಸ. ಸ. ಎತ್ತರ ೧೯೪೯'). — ಹುನಗುಂದದ ದಕ್ಷಿಣಕ್ಕೆ ೮ ಮೈ
ಲಿನ ಮೇಲೆ ಇರುತ್ತದೆ. ಇದು ವಿಜಾಪುರ ಜಿಲ್ಹೆಯಲ್ಲಿ ಮುಖ್ಯ ಪಡಿಮೂಲ
ಗಳಲ್ಲಿ ಎಣಿಸಲ್ಪಡುತ್ತದೆ. ಇದು ಮೊದಲು ಮಹಾಲಿನ ಗ್ರಾಮವಾಗಿತ್ತು
ಇಲ್ಲಿ ಹುಟ್ಟುವ ಸೀರೆಗಳ ವಿಷಯವಾಗಿ ಈ ಊರು ಬಳ್ಳೇ ಪ್ರಸಿದ್ಧವಿದೆ. ಇಲ್ಲಿ
೨-೩ ಅರ್ವಾಚೀನ ದೇವಸ್ಥಾನಗಳು ನೋಡತಕ್ಕಂಥವಿರುವವು.

ಕಾಖಂಡಿಕಿ (ಸ. ಸ. ಎತ್ತರ ೧೮೭೫'). — ವಿಜಾಪುರದ ದಕ್ಷಿಣಕ್ಕೆ ೧೬
ಮೈಲಿನ ಮೇಲೆ ಇರುತ್ತದೆ. ಇಲ್ಲಿ ಮಹಿಪತಸ್ವಾಮಿಗಳ ವೃಂದಾವನವಿರುತ್ತದೆ
ಅವರ ಆರಾಧನೆಯು ಮಾರ್ಗಶೀರ್ಷ ಶುದ್ಧ ಪ್ರತಿಪದೆಯ ದಿವಸ ಆಗುತ್ತದೆ
ಈ ಸ್ವಾಮಿಗಳು ಅಥಣಿಯ ಹತ್ತರಿರುವ ಐಗಳಿಯ ಕುಲಕರಣಿಯವರು
ಔರಂಗಜೇಬನು ವಿಜಾಪುರದಲ್ಲಿದ್ದಾಗ ಸ್ವಪರಾಕ್ರಮದಿಂದ ಅವನ ಪ್ರಧಾನ
ರಾಗಿದ್ದರು. ಮುಂದೆ ಸಾರವಾಡದ ಭಾಸ್ಕರಸ್ವಾಮಿಯ ಸೇವೆಯನ್ನು ಸ್ವೀಕ
ರಿಸಿ ಮಂತ್ರಿಪದವನ್ನು ಬಿಟ್ಟರು. ಊರ ಹೊರಗೆ ದಸ್ತಗೀರರೆಂಬ ಪೀರನ
ದರ್ಗಾದಲ್ಲಿ ಪ್ರತಿವರ್ಷ ಉರುಸು ಆಗುವದು.

ಕಲಾದಗಿ (ಸ. ಸ. ಎತ್ತರ ೧೭೭೦'). — ವಿಜಾಪುರದ ದಕ್ಷಿಣಕ್ಕೆ ೯೫ ಮೈ
ಲಿನ ಮೇಲೆ ಘಟಪ್ರಭೆಯ ದಂಡೆಯಲ್ಲಿ ಇರುತ್ತದೆ. ಇದು ಪೂರ್ವದಲ್ಲಿ ಅಪ್ರ
ಸಿದ್ಧವಾದ ಗ್ರಾಮವು. ಬ್ರಿಟಿಶ ಸರಕಾರದ ಅಮಲಿನ ಆರಂಭದಲ್ಲಿ ದಕ್ಷಿಣ
ಮಹಾರಾಷ್ಟ್ರ ಜಹಾಗೀರದಾರರು ಸರಕಾರದ ನೌಕರಿಗೆ ಇಟ್ಟ ರಾಹುತರು
ಕಲಾದಗಿಯಲ್ಲಿ ಇರುತ್ತಿದ್ದರು. ಆ ರಾಹುತರನ್ನು ಸರಕಾರದವರು ತೆಗೆದ
ಬಳಿಕ ರಾಹುತರ ಛಾವಣಿಯು ಹಾಳುಬಿತ್ತು. ಮುಂದೆ ಸನ್ ೧೮೬೪ರಲ್ಲಿ
ಕಲಾದಗಿಯು ಜಿಲ್ಹೆಯ ಮುಖ್ಯ ಸ್ಥಳವಾದದರಿಂದ ಊರು ತುಂಬುತ್ತ ನಡೆ
ದಿತ್ತು. ಆದರೆ ಜಿಲ್ಹೆಯ ಠಾಣ್ಯವನ್ನು ಸನ್ ೧೮೮೪ರಲ್ಲಿ ವಿಜಾಪುರಕ್ಕೆ ಒಯ್ದದ್ದ
ರಿಂದ ಕಲಾದಗಿಯು ಮೊದಲಿನಂತೆ ಹಳ್ಳಿಯ ಸ್ವರೂಪವನ್ನು ಹೊಂದಿತು. ಇಲ್ಲಿ
ಸ್ಲೇಟಿನ ಕಲ್ಲುಗಳೂ ಮಸೆಯುವ ಕಲ್ಲುಗಳೂ ದೊರೆಯುತ್ತವೆ.

ಕುಂದರಗಿ (ಸ. ಸ. ಎತ್ತರ ೧೭೭೨', ಗುಡ್ಡ ೧೯೧೬').—ಬಾಗಲಕೋಟಿಯ ವಾಯವ್ಯಕ್ಕೆ ೧೨ ಮೈಲಿನ ಮೇಲೆ ಇದೆ. ಇಲ್ಲಿ ಮಾರುತಿ, ಈಶ್ವರ ಎಂಬೆರಡು ದೇವಸ್ಥಾನಗಳಿವೆ. ಮಾರುತಿಯ ಮೂರ್ತಿಯು ಸುಂದರವಾದದ್ದಿದ್ದು, ಈಶ್ವರನ ಗುಡಿಯು ೧೨ನೇ ಶತಮಾನಗಲ್ಲಿ ಕಟ್ಟಿದಂತೆ ತೋರುತ್ತದೆ. ಇಲ್ಲಿ ಜೋಡುಗಳು ತಯಾರ ಆಗುತ್ತವೆ.

ಕೆರೂರ (ಸ. ಸ. ಎತ್ತರ ೨೦೫೩').—ಬಾದಾಮಿಯ ವಾಯವ್ಯಕ್ಕೆ ೧೧ ಮೈಲಿನ ಮೇಲೆ ಇದೆ. ಈ ಊರು ಇರುವ ಸ್ಥಳದಲ್ಲಿ ಒಬ್ಬ ಸಮಗಾರನು ಗುಡಿಸಲು ಹಾಕಿಕೊಂಡು ಇರುತ್ತಿದ್ದನು. ಅವನು ದಾರಿಕಾರರ ಹರಕು ಕೆರವುಗಳನ್ನು ಹೊಲಿದು ಹೊಟ್ಟೆತುಂಬಿಸಿಕೊಳ್ಳುತ್ತಿದ್ದನು. ಸಲಾಬಿತಖಾನನೆಂಬ ಪಠಾಣನು ಬೇಟೆಯಾಡುತ್ತ, ಆ ಕೆರವುಗಾರನ ಮನೆಗೆ ಬಂದು ನೀರು ಕುಡಿದು, ಅಲ್ಲಿ ದಾರಿಕಾರರ ತುಳುಕಲು ಬಹಳ ಇರುತ್ತದೆಂದು ಕೇಳಿ ಆ ಸಮಗಾರನ ಸಹಾಯ ತೆಗೆದುಕೊಂಡು ಕೆರೂರಿನ ಕೋಟೆಯನ್ನು ಕಟ್ಟಿಸಿದನು. ಈ ಕೋಟೆಯ ಒಂದು ಕೊತ್ತಳದಲ್ಲಿ ಒಂದು ಕಲ್ಲಿನ ಮೇಲೆ ಆ ಕೆರವುಗಾರನ ಮೂರ್ತಿಯನ್ನು ಕಟೆದು ಇಟ್ಟಿದ್ದಾರೆ. ಅವನಿಂದಲೇ ಕೆರೂರು (ಕೆರವಿನವನ ಊರು) ಎಂಬ ಹೆಸರು ಬಂದಿದೆ. ಊರ ಸುತ್ತಲು ಕೋಟೆಯು ಸಾಮಾನ್ಯ ತರದ್ದಿರುತ್ತದೆ. ಕೋಟೆಯ ಹೊರಗೆ ಬಾಜಾರು ಇರುವದು. ಇಲ್ಲಿ ಏಳೆಂಟು ಗುಡಿಗಳಿರುತ್ತವೆ. ರಾಚೋಟೇಶ್ವರನ ರಾಮನವಮಿಯ ರಥೋತ್ಸವದಲ್ಲಿ ಭಕ್ತರು ದೇವರ ಮುಂದೆ ಬೆಂಕಿಯ ಮೇಲೆ ನಡೆಯುತ್ತಾರೆ. ಈ ಊರಲ್ಲಿ ಕೆಲವು ಲಿಪಿಗಳಿರುತ್ತವೆ. ಗಣಪತಿ ಗುಡಿಯೊಳಗಿನ ಮೂರ್ತಿಯ ಹೊಟ್ಟೆಯಲ್ಲಿ ದ್ರವ್ಯವಿರುತ್ತದೆಂದು ತಿಳಿದು ಯಾರೋ ಮೂರ್ತಿಯನ್ನು ಒಡೆದು ಚಲ್ಲಿರುವರು.

ಕರಡಿ (ಸ. ಸ. ಎತ್ತರ ೧೬೫೬').—ಹುನಗುಂದದ ಈಶಾನ್ಯಕ್ಕೆ ೧೦ ಮೈಲಿನ ಮೇಲೆ ಇರುತ್ತದೆ. ಇಲ್ಲಿ ಮೂರು ಪ್ರಾಚೀನ ಗುಡಿಗಳೂ, ಮೂರು ಲಿಪಿಗಳೂ ಇರುತ್ತವೆ. ಬಸವಣ್ಣನ ಗುಡಿಯೊಳಗಿನ ಬಸವಣ್ಣನು ಕರಡಿಯ ಹಾಗೆ ಇರುವದರಿಂದ ಈ ಊರಿಗೆ ಈ ಹೆಸರು ಬಂದಿದೆಯೆಂದು ಹೇಳುತ್ತಾರೆ. ಶಿಲಾಲಿಪಿಗಳಲ್ಲಿ ಒಂದು ವಿಜಯನಗರದ ಸದಾಶಿವರಾಯನು ಸನ್ ೧೫೫೩ರಲ್ಲಿ ಬರಿಸಿದ್ದಿರುತ್ತದೆ.

ಕಮತಗಿ (ಸ. ಸ. ಎತ್ತರ ೧೬೩೮', ಗುಡ್ಡ ೧೮೮೮').—ಹುನಗುಂದದ ಪಶ್ಚಿಮಕ್ಕೆ ೧೪ ಮೈಲಿನ ಮೇಲೆ ಇರುತ್ತದೆ. ಇಲ್ಲಿ ಚಿತ್ರವಿಚಿತ್ರವಾದ ಹಿತ್ತಾಳಿಯ ತಬಕಗಳೂ, ಉತ್ತಮ ಖಣಗಳೂ ಭಾಂಡುಗಳೂ ಹುಟ್ಟುತ್ತವೆ.

ಮಮದಾಪುರ (ಸ. ಸ. ಎತ್ತರ ೧೮೩೪′).— ವಿಜಾಪುರದ ನೈಋತ್ಯಕ
೨೦ ಮೈಲಿನ ಮೇಲೆ ಇರುತ್ತದೆ. ವಿಜಾಪುರದ ಮಹಮ್ಮೂದಶಹನಿಗೆ ಕೊಂಕ
ವನ್ನು ನೋಡುವ ಅಪೇಕ್ಷೆಯು ಆದದರಿಂದ ಅವನ ಮಂತ್ರಿಯಾದ ಮುರಾ
ಪಂತನು, ಈಗ ಮಮದಾಪುರವು ಇರುವ ಸ್ಥಳದಲ್ಲಿ ಹೊಸ ಕೆರೆಗಳನ್ನು ಕಟ್ಟಿಸಿ
ಕೊಂಕಣದ ಪೈರುಗಳನ್ನು ಸ್ವಲ್ಪ ದಿವಸಗಳಲ್ಲಿ ಬೆಳಿಸಿ ಬಾದಶಹನಿಗೆ ತೋ
ಸಲು, ಬಾದಶಹನು ತುಷ್ಟನಾಗಿ ಅಲ್ಲಿ ಹೊಸ ಊರು ಕಟ್ಟಿಸಿ ಅದಕ್ಕೆ ಮ
ಮುದಾಪುರವೆಂದು ತನ್ನ ಹೆಸರನ್ನೇ ಇಟ್ಟನು. ಮೊದಲು ಈ ಸ್ಥಳದಲ್ಲಿ ಸ
ನಾಲ್ಕು ಹಳ್ಳಿಗಳಿದ್ದವು. ಈ ಊರ ಹತ್ತರಿರುವ ಎರಡು ಕೆರೆಗಳಲ್ಲಿ ಒಂದ
ಬಹಳೇ ದೊಡ್ಡದಿರುತ್ತದೆ. ಅದರಷ್ಟು ದೊಡ್ಡ ಕೆರೆಯು ಈ ಪ್ರಾಂತದ
ಇನ್ನೊಂದಿಲ್ಲ. ಈ ಎರಡೂ ಕೆರೆಗಳ ಮೇಲೆ ಮಹಮೂದಶಹನು ಬರೆಯಿಸಿ
ಲಿಪಿಗಳುಂಟು. ಎರಡೂ ಕೆರೆಗಳಿಗೆ ಕೂಡಿ ೫೦ ಸಾವಿರ ಹೊನ್ನುಗಳು ಖರ್ಚಾ
ಗಿರುವವೆಂದು ಬರೆದಿದೆ. ಈ ಊರಲ್ಲಿ ಅರ್ವಾಚೀನ ಕಾಲದ ಹತ್ತೆಂಟು ಗು
ಗಳಿರುತ್ತವೆ. ಕಮಾಲಸಾಹೇಬನೆಂಬ ಪೀರನ ಗೋರಿಯು ಇನ್ನೊಂದು ಕ
ಗಿದೆ. ಈ ಊರಲ್ಲಿ ಧಡೋತಿಯ ಬಟ್ಟೆಗಳು ಹುಟ್ಟುತ್ತವೆ.

ಮನಗೋಳಿ (ಸ. ಸ. ಎತ್ತರ ೧೬೫೭′).— ಈ ಊರು ಒಕ್ಕಲತನದ ಬ
ಹೆಸರಾಗಿದೆ. ಇಲ್ಲಿ ಮೊದಲು ತಾಲೂಕ ಕಚೇರಿ ಇತ್ತು. ಇಲ್ಲಿಂದ ಬಾಗೆ
ವಾಡಿಗೆ ಒಯ್ದಿರುವರು.

ಮುದ್ದೇಬಿಹಾಳ (ಸ. ಸ. ಎತ್ತರ ೧೮೯೩′).— ವಿಜಾಪುರದ ಆಗ್ನೇಯಕ
೪೫ ಮೈಲಿನ ಮೇಲೆ ಇರುತ್ತದೆ. ಇದು ತಾಲೂಕಿನ ಮುಖ್ಯ ಸ್ಥಳವು. ಬಸ
ಕೋಡದ ಈಗಿನ ನಾಡಗೌಡರ ಮೂಲಪುರುಷನಾದ ಪರಮಣ್ಣನೆಂಬವನ
ಸನ್ ೧೬೮೦ರಲ್ಲಿ ಈ ಊರನ್ನು ಕಟ್ಟಿಸಿದನು. ಈ ಊರಲ್ಲಿ ಬಿಳೇ ಮುಂಡಾ
ಗಳೂ ಬೀಸುವ ಕಲ್ಲುಗಳೂ ಹುಟ್ಟುತ್ತವೆ.

ಮಂಕಣಿ (ಸ. ಸ. ಎತ್ತರ ೧೬೫೦′). — ಬಾಗಲಕೋಟಿಯ ಈಶಾನ್ಯಕ
೨೦ ಮೈಲಿನ ಮೇಲೆ ಇದೆ. ಕೃಷ್ಣೆಯ ದಂಡೆಯಲ್ಲಿಯ ಈಶ್ವರನ ಗುಡಿಯ
ದೇವಗಿರಿಯಾದವರ ಕನ್ನಡ ಲಿಪಿಯುಂಟು. ಕೃಷ್ಣೆಯ ದಂಡೆಯಲ್ಲಿರುವ ಒಂದ
ಕುಂಡದೊಳಗಿನ ನೀರು ವಿಷವಾಗಿರುತ್ತದೆಂದು ಅದರ ಸುತ್ತುಮುತ್ತು ಬೇ
ಯನ್ನು ಹಚ್ಚಿರುತ್ತಾರೆ.

ಮುದಕವಿ (ಸ. ಸ. ಎತ್ತರ ೧೯೬೭′).— ಬಾದಾಮಿಯ ವಾಯವ್ಯಕ

೨೫ ಮೈಲಿನ ಮೇಲೆ ಇರುತ್ತದೆ. ಊರ ಸುತ್ತುಮುತ್ತು ಕೋಟೆಯೂ ನಡು ಊರಲ್ಲಿ ಬಾಲೇ ಕಿಲ್ಲೆಯೂ ಉಂಟು. ಈಗ ಎರಡೂ ಹಾಳಾಗಿವೆ. ಪೂರ್ವ ಕಾಲದಲ್ಲಿ ಇದಕ್ಕೆ 'ಗಹನದುರ್ಗ'ವೆನ್ನುತ್ತಿದ್ದರು. ಇಲ್ಲಿ ಧಡೋತಿ ವಸ್ತ್ರಗಳು ಹುಟ್ಟುತ್ತವೆ.

ನಿಂಬರಗಿ (ಸ. ಸ. ಎತ್ತರ ೧೮೯೫').— ಇಂಡಿಯ ವಾಯವ್ಯಕ್ಕೆ ೨೭ ಮೈಲಿನ ಮೇಲೆ ಇರುತ್ತದೆ. ಇಲ್ಲಿಯ ಪ್ರಾಣದೇವರ ಪ್ರಸಿದ್ಧಿಯುಂಟು. ಈ ದೇವರ ಗುಡಿಯನ್ನು ಒಂದು ವಿಸ್ತಾರವಾದ ಬೈಲೊಳಗೆ ಕಟ್ಟಿದ್ದಾರೆ. ಸುತ್ತುಮುತ್ತು ಪೌಳಿಗಳಿವೆ. ಬಳಿಯಲ್ಲಿಯೇ ಒಂದು ಹಳ್ಳವು ಹರಿಯುತ್ತದೆ. ಈ ಗುಡಿಯು ಊರ ಹೊರಗೆ ಇರುವದರಿಂದ ರಮಣೀಯವಾದ ಏಕಾಂತ ಸ್ಥಳವೆನಿಸುತ್ತದೆ. ಗರ್ಭಗುಡಿಯಲ್ಲಿ ಒಂದು ಸೀತಾರಾಮರ ಮೂರ್ತಿಯೂ, ಹನುಮಂತ ದೇವರ ಎರಡು ಮೂರ್ತಿಗಳೂ, ಒಂದು ಲಿಂಗವೂ ಉಂಟು. ಮುಖ್ಯ ಹನುಮಂತ ದೇವರ ಮೂರ್ತಿಯು ಒಂದು ಕಲ್ಲಿನ ಮೇಲೆ ಮೂಡಿದ ಹಾಗಿರುತ್ತದೆ. ಧನಾಯಿ ಎಂಬ ಕುರುಬರ ಹೆಂಗಸು ಇದನ್ನು ಕಟ್ಟಿಸಿದಳೆಂದು ಹೇಳುತ್ತಾರೆ.

ನಾಲತವಾಡ (ಸ. ಸ. ಎತ್ತರ ೧೭೪೦').— ಮುದ್ದೇಬಿಹಾಳದ ಆಗ್ನೇಯಕ್ಕೆ ೧೩ ಮೈಲಿನ ಮೇಲೆ ಇದೆ. ಇಲ್ಲಿ ಮೂರು ಗುಡಿಗಳೂ ನಾಲ್ಕು ಲಿಪಿಗಳೂ ಇರುತ್ತವೆ. ಒಂದು ಲಿಪಿಯು ಚಾಲುಕ್ಯರ ಜಗದೇಕಮಲ್ಲನೆಂಬವನು ಬರಿಸಿದ್ದಿರುತ್ತದೆ.

ನಂದಿಕೇಶ್ವರ (ಸ. ಸ. ಎತ್ತರ ೧೭೪೦').— ಬಾದಾಮಿಯ ಪೂರ್ವಕ್ಕೆ ೩ ಮೈಲಿನ ಮೇಲೆ ಇರುತ್ತದೆ. ಕೆಲವು ಸಣ್ಣಸಣ್ಣ ಹಳ್ಳಿಗಳು ಕೂಡಿ ಈ ಊರು ಆಗಿರುತ್ತದೆ. ಇಲ್ಲಿಯ ಮಹಾಕೂಟೇಶ್ವರವೆಂಬ ದೇವಾಲಯಗಳು ಬಹು ಪ್ರಸಿದ್ಧ. ಗುಡಿಯ ಆವಾರದ ಮಧ್ಯಭಾಗದಲ್ಲಿ ವಿಷ್ಣು ಪುಷ್ಕರಿಣೀ ತೀರ್ಥವೆಂಬ ಹೊಂಡವಿರುತ್ತದೆ. ಅದನ್ನು ಅಗಸ್ತ್ಯಋಷಿಯು ಕಟ್ಟಿಸಿದನೆಂದು ಹೇಳುತ್ತಾರೆ. ಮಹಾಕೂಟೇಶ್ವರನ ಗುಡಿಯಲ್ಲಿ ಕಂಬಗಳ ಮೇಲೆ ಆರು ಲಿಪಿಗಳಿರುತ್ತವೆ. ಇವು ೭ರಿಂದ ೧೦ನೇ ಶತಮಾನದ ವರೆಗಿನ ಚಾಲುಕ್ಯರ ಆಳಿಕೆಯಲ್ಲಿ ಬರೆದಂಥವು ಇರುತ್ತವೆ.

ನಂದವಾಡಗಿ (ಸ. ಸ. ಎತ್ತರ ೧೮೩೯').— ಹುನಗುಂದದ ಆಗ್ನೇಯಕ್ಕೆ ೧೫ ಮೈಲಿನ ಮೇಲೆ ನಿಜಾಮನ ರಾಜ್ಯದ ಸೀಮೆಯ ಬಳಿಯಲ್ಲಿ ಇರುತ್ತದೆ. ಊರಲ್ಲಿ ಕೋಟೆಯೆಂತಲೂ ಪೇಟೆಯೆಂತಲೂ ಎರಡು ಭಾಗಗಳಿವೆ. ಇದು

ಪೂರ್ವದಲ್ಲಿ ನಂದರಾಜನೆಂಬ ಅರಸನ ರಾಜಧಾನಿ ಇತ್ತೆಂದು ಹೇಳುತ್ತಾರೆ. ಒಂದು ಬಾವಿಯ ಮೇಲೆ ಇರುವ ನಾರಾಯಣನ ಗುಡಿಯಲ್ಲಿ ರಾಷ್ಟ್ರಕೂಟರ ಆಳಿಕೆಯಲ್ಲಿ (ಸನ್ ೯೦೨ರಲ್ಲಿ) ಬರಿಸಿದ್ದೊಂದು ಲಿಪಿಯುಂಟು. ಕೋಟೆಯೊಳಗೆ ಈಶ್ವರನ ಗುಡಿಯ ಹತ್ತರ ಬಿದ್ದಿರುವ ಉದ್ದವಾದ ಕಂಬದ ಮೇಲೆ ಕನ್ನಡ ಲಿಪಿಗಳಿರುತ್ತವೆ.

ಪಟ್ಟದ ಕಲ್ಲು (ಸ. ಸ. ಎತ್ತರ ೧೬೮೪').—ಬಾದಾಮಿಯ ಈಶಾನ್ಯಕ್ಕೆ ೯ ಮೈಲಿನ ಮೇಲೆ ಮಲಾಪಹಾರಿ ತೀರದಲ್ಲಿ ಉಂಟು. ಇದಕ್ಕೆ ಬುನಾದಿಯಲ್ಲಿ 'ಕಿಸುವೊಳಲು' ಎಂದು ಅನ್ನುತ್ತಿದ್ದರು. ಇಲ್ಲಿ ಪುರಾತನ ಗುಡಿಗಳೂ ಶಿಲಾಲಿಪಿಗಳೂ ಬಹಳ ಉಂಟು. ಸನ್ ೧೫೦ರಲ್ಲಿ ಇಜಿಪ್ತ ದೇಶದ ತಾಲೆಮಿ ಎಂಬ ಗ್ರಂಥಕರ್ತನು 'ಪೆತ್ರಿಕಲ್' ಎಂಬ ಹೆಸರಿನಿಂದ ಈ ಊರಿನ ಉಲ್ಲೇಖವನ್ನು ತನ್ನ ಗ್ರಂಥದಲ್ಲಿ ಮಾಡಿದ್ದಾನೆ. ಇಲ್ಲಿಯ ಪಾಪನಾಥನ ಗುಡಿಯನ್ನು ೫ನೇ ಶತಮಾನದಲ್ಲಿ ಕಟ್ಟಿದಂತೆ ತೋರುತ್ತದೆ. ಇದರಷ್ಟು ಹಳೇ ಇಮಾರತು ದಕ್ಷಿಣ ಮಹಾರಾಷ್ಟ್ರದಲ್ಲಿ ಎಲ್ಲಿಯೂ ಇಲ್ಲೆಂದು ಹೇಳುತ್ತಾರೆ. ಚಾಲುಕ್ಯರ ಆಳಿಕೆಯಲ್ಲಿ ಪಟ್ಟದ ಕಲ್ಲು ಕ್ಷೇತ್ರವೆಂದು ಎಣಿಸಲ್ಪಡುತ್ತಿತ್ತು.

ಸಾಲೋಟಗಿ (ಸ. ಸ. ಎತ್ತರ ೧೫೯೨').—ಇಂಡಿಯ ಆಗ್ನೇಯಕ್ಕೆ ಆರು ಮೈಲಿನ ಮೇಲೆ ಇದೆ. ಇಲ್ಲಿ ಶಿವಯೋಗೀಶ್ವರನ ಪುರಾತನ ಗುಡಿಯು ದೊಡ್ಡದಿರುತ್ತದೆ. ಇದರ ಮೇಲೆ ಶಿಖರವಿಲ್ಲ. ಸೋರಟಿ ಸೋಮನಾಥನ ಗುಡಿಯನ್ನು ಗಿಝುನಿಯ ಮಹಮೂದನು ಹಾಳುಮಾಡಿದ ಕಾಲಕ್ಕೆ ಈ ಗುಡಿಯಲ್ಲಿಯ ಈಶ್ವರನು ತನ್ನನ್ನು ನೆಲದೊಳಗೆ ಹುಗಿಯೆಂದು ಪೂಜಾರಿಗೆ ಸ್ವಪ್ನದಲ್ಲಿ ಬಂದು ಹೇಳಿದನಂತೆ. ಈ ಗುಡಿಯನ್ನು ಕಲ್ಯಾಣಪಟ್ಟಣದ ಚಾಲುಕ್ಯ ಅರಸರು ಕಟ್ಟಿಸಿದಂತೆ ತೋರುತ್ತದೆ. ಆ ಅರಸರು ಕೊಟ್ಟ ಇನಾಮು ದೇವರಿಗೆ ಇಂದಿಗೂ ನಡೆಯುತ್ತದೆ. ಈ ಗುಡಿಯೊಳಗಿನ ಲಿಪಿಯ ಕಂಬವನ್ನು ಅಗಸೆಯಲ್ಲಿ ಒಯ್ದು ಇಟ್ಟಿರುತ್ತಾರೆ. ಅದರಲ್ಲಿ ರಾಷ್ಟ್ರಕೂಟರ ನಾಲ್ಕನೇ ಕೃಷ್ಣರಾಜನ ಆಳಿಕೆಯಲ್ಲಿ ಸನ್ ೯೪೭ನೇ ವರ್ಷ ಕರ್ಣಪುರೀ ಪ್ರಾಂತದಲ್ಲಿ ಪವಿಟ್ಟಗೆ ಎಂಬಲ್ಲಿ ವಿದ್ಯಾಲಯವನ್ನು ಸ್ಥಾಪಿಸಿದ ಬಗ್ಗೆ ಲೇಖವುಂಟು. ಆ ವಿದ್ಯಾಲಯಕ್ಕೆ ಭೂಮಿಯನ್ನು ಕೊಟ್ಟದ್ದು ಅದರಲ್ಲಿ ಬರೆದಿದೆ. ಪವಿಟ್ಟಗೆ ಎಂದರೆ ಸಾಲೋಟಗಿ ಎಂದು ತರ್ಕಿಸುವರು. ಈ ಊರಲ್ಲಿಯ ಇನ್ನೊಂದು ಶಿಲಾಲಿಪಿಯನ್ನು ಇಂಡಿಯ ಪೊಲೀಸ ಕಚೇರಿಯ ಹತ್ತರ ಒಯ್ದು ಇಟ್ಟಿರುತ್ತಾರೆ.

ಸಿಂದಗಿ (ಸ. ಸ. ಎತ್ತರ ೧೬೮೭').— ವಿಜಾಪುರದ ಈಶಾನ್ಯಕ್ಕೆ ೩೫ ಮೈಲಿನ ಮೇಲೆ ಇರುತ್ತದೆ. ಇದು ತಾಲೂಕಿನ ಮುಖ್ಯ ಗ್ರಾಮವು. ಇಲ್ಲಿ ತಾಲೂಕ ಕಚೇರಿಯೂ ಆಸ್ಪತ್ರಿಯೂ ಉಂಟು. ಈ ಗ್ರಾಮವನ್ನು ಸಿಂಧು ಬಲ್ಲಾಳನೆಂಬವನು ೧೨ನೇ ಶತಮಾನದಲ್ಲಿ ಸ್ಥಾಪಿಸಿದನೆಂದು ಹೇಳುತ್ತಾರೆ. ಇಲ್ಲಿಯ ಸಂಗಮೇಶ್ವರನ ಗುಡಿಯ ಒಳಗೂ ಹೊರಗೂ ಅಸಂಖ್ಯ ಲಿಂಗಗಳಿರುತ್ತವೆ. ಮಕರ ಸಂಕ್ರಾಂತಿಯ ದಿವಸ ಈ ಗುಡಿಯೊಳಗಿನ ಈಶ್ವರನಿಗೂ ಪಾರ್ವತಿಗೂ ಲಗ್ನವಾಗುತ್ತದೆ. ಊರ ಕುಲಕರ್ಣಿಯರು ಗಂಡಿನ ಕಡೆಯವರೂ ಗೌಡರು ಹೆಣ್ಣಿನ ಕಡೆಯವರೂ ಆಗುತ್ತಾರೆ. ಈ ಊರ ಕುಲಕರ್ಣಿಯವರಾದ ಜಕ್ಕಪ್ಪಯ್ಯರೆಂಬವರು ಸತ್ಪುರುಷರೆನಿಸಿಕೊಂಡು ಸನ್ಯಾಸಿಯಾಗಿ ದೇಹ ಬಿಟ್ಟರು. ಅವರ ಸಮಾಧಿಯು ಊರ ಹೊರಗೆ ಇರುತ್ತದೆ. ಭೀಮಾ ಸಂಕರಪ್ಪನವರ ಆರಾಧನೆಯ ದಿವಸ ಊಟಕ್ಕೆ ಬಂದ ಬ್ರಾಹ್ಮಣರ ಕಾಲುಗಳನ್ನು ತೊಳೆದ ನೀರು ಎಷ್ಟು ಬಿದ್ದರೂ ಅಲ್ಲಿ ಇಟ್ಟಿರುವ ಬಿಂದಿಗೆಯು ತುಂಬುವದೇ ಇಲ್ಲವಂತೆ. ಅದನ್ನು ಒಂದು ಜಗುಲಿನ ಮೇಲೆ ಇಟ್ಟಿರುವರು.

ದಿವಾಕರ ದೀಕ್ಷಿತನೆಂಬ ದಾಳಿಗಾರನು ಸನ್ ೧೮೨೪ರಲ್ಲಿ ಸಿಂದಗಿಯ ಕೋಟೆಯನ್ನು ಆಕ್ರಮಿಸಿ ಸುಲಿಗೆಯನ್ನು ಮಾಡುತ್ತಿದ್ದನು. ಅವನನ್ನು ಸರಕಾರದವರು ಹಿಡಿದು ಶಿಕ್ಷಿಸಿ ಕೋಟೆಯನ್ನು ನೆಲಸಮ ಮಾಡಿದರು.

ಸಿರೂರು (ಸ. ಸ. ಎತ್ತರ ೧೯೩೯').— ಬಾಗಲಕೋಟೆಯ ಆಗ್ನೇಯಕ್ಕೆ ೯ ಮೈಲಿನ ಮೇಲೆ ಇದೆ. ಇಲ್ಲಿ ಕೆಲವು ಪ್ರಾಚೀನ ಗುಡಿಗಳಿವೆ. ಈ ಗುಡಿಗಳಲ್ಲಿ ೧೦ನೇ ೧೧ನೇ ಶತಮಾನದ ಲಿಪಿಗಳಿರುತ್ತವೆ. ಸಿದ್ಧೇಶ್ವರನ ಗುಡಿಯಲ್ಲಿಯ ಲಿಪಿಗಳು ಕೊಲ್ಹಾಪುರದ ಮಾಂಡಲಿಕ ರಾಜರ (ಶಿಲಾಹಾರರ) ಕಾಲದವಿರುತ್ತವೆ. ಊರ ಹೊರಗೆ ಗುಡ್ಡದ ಮೇಲೆ ಬೈಲೊಳಗೆ ಹನುಮಂತನ ಮೂರ್ತಿಯುಂಟು. ಈ ಊರಲ್ಲಿ ಜೈನರ ಕಾಲದ ಕಂಬಗಳು ಬಹಳ ಇರುತ್ತವೆ. ಇಲ್ಲಿಯ ಕೆರೆಯು ಚಂದವಾದದ್ದಿರುತ್ತದೆ.

ಸಂಗಮ (ಸ. ಸ. ಎತ್ತರ ೧೬೮೯').— ಹುನಗುಂದದ ಉತ್ತರಕ್ಕೆ ೯ ಮೈಲಿನ ಮೇಲೆ ಕೃಷ್ಣೆಗೆ ಮಲಾಪಹಾರಿಯು ಕೂಡಿದ ಸ್ಥಳದಲ್ಲಿ ಇರುತ್ತದೆ. ಅಲ್ಲಿ ಸಂಗಮೇಶ್ವರವೆಂಬ ದೇವಸ್ಥಾನವಿರುತ್ತದೆ. ಇದನ್ನು ಸುಮಾರು ೮೦೦ ವರ್ಷಗಳ ಹಿಂದೆ ದೇವನಾಯಕನೆಂಬ ಜೈನನು ಕಟ್ಟಿಸಿದನೆಂದು ಹೇಳುತ್ತಾರೆ. ಇಲ್ಲಿ ಓದಲಿಕ್ಕೆ ಬಾರದಂಥ ಎರಡು ಲಿಪಿಗಳಿವೆ. ಬಸವೇಶ್ವರನು ಕಲ್ಯಾಣ

ಪುರದಲ್ಲಿ ತನ್ನ ಶಿಷ್ಯರಿಗೆ ಬಿಜ್ಜಳನನ್ನು ಕೊಲ್ಲ ಹೇಳಿ ಈ ಊರಿಗೆ ಬಂದು ಸಂಗಮೇಶ್ವರನಲ್ಲಿ ಐಕ್ಯ ಹೊಂದಿದನಂತೆ. ಸಂಗಮೇಶ್ವರನ ಜಾತ್ರೆಯು ಚೈತ್ರ ವದ್ಯ ೫ ದಿವಸ ಆಗುತ್ತದೆ.

ತೊರವಿ (ಸ. ಸ. ಎತ್ತರ ೨೦೦೯').—ವಿಜಾಪುರದ ಪಶ್ಚಿಮಕ್ಕೆ ೪ ಮೈಲಿನ ಮೇಲೆ ಇದೆ. ವಿಜಾಪುರದ ಏಳಿಗೆಯ ಕಾಲದಲ್ಲಿ ಇದೂ ವಿಜಾಪುರದ ಭಾಗವಾಗಿತ್ತು. ೨ನೇ ಇಬ್ರಾಹಿಮಶಹನು ದೊಡ್ಡದೊಡ್ಡ ಅರಮನೆಗಳನ್ನೂ ಮಸೀದೆಗಳನ್ನೂ ಕಟ್ಟಿಸಿ ಇಲ್ಲಿ ಇರುತ್ತಿದ್ದನು. ಈ ಊರ ಹತ್ತರ ಒಂದು ನಾಯಿಯು ನರಿಯನ್ನು ಬೆನ್ನಟ್ಟಿರಲಾಗಿ, ನರಿಯು ಹಿಂದಿರುಗಿ ನಾಯಿಯನ್ನು ಹಿಡಿಯಿತಂತೆ. ಇದು ಅಪಶಕುನವೆಂದು ತಿಳಿದು ಇಬ್ರಾಹಿಮಶಹನು ತೊರವಿಯನ್ನು ಬಿಟ್ಟು ವಿಜಾಪುರದಲ್ಲಿ ಬಂದು ನಿಂತನಂತೆ. ಅವನು ಕಟ್ಟಿಸಿದ ಇಮಾರತುಗಳಲ್ಲಿ ಒಂದೆರಡು ಮಸೀದೆಗಳು ಮಾತ್ರ ಇನ್ನೂ ಅವೆ. ಅರ್ವಾಚೀನ ಕಾಲದ ಹತ್ತೆಂಟು ಗುಡಿಗಳೂ ಉಂಟು. ಅವುಗಳಲ್ಲಿ ನರಸಿಂಹನ ಗುಡಿಯು ಬಹು ಜಾಗೃತಸ್ಥಾನವೆಂದು ಎಣಿಸಲ್ಪಡುತ್ತದೆ. ಇಲ್ಲಿಯೇ ತೊರವೆಯ ರಾಮಾಯಣವು ರಚಿತವಾದದ್ದು.

ತಾಳೀಕೋಟಿ (ಸ. ಸ. ಎತ್ತರ ೧೬೫೦').—ಮುದ್ದೇಬಿಹಾಳದ ಈಶಾನ್ಯಕ್ಕೆ ೧೫ ಮೈಲಿನ ಮೇಲೆ ಅದೆ. ಪುಣೆಯ ಬಾಳಾಜಿ ಬಾಜೀರಾಯನು ತನ್ನ ಬೀಗನಾದ ಆನಂದರಾವ ರಾಸ್ತೆ ಎಂಬವನಿಗೆ ತಾಳೀಕೋಟಿಯನ್ನು ಸನ್ ೧೭೫೦ರ ಸುಮಾರಿನಲ್ಲಿ ಸರಂಜಾಮಿಗಾಗಿ ಹಾಕಿಕೊಟ್ಟನು. ಅವನು ಆನಂದ ರಾವ ಪೇಟೆ, ಕೈಲಾಸ ಪೇಟೆ ಎಂಬ ಪೇಟೆಗಳನ್ನು ಕಟ್ಟಿಸಿದನು. ಪೇಶವನ ರಾಜ್ಯವು ಹಾಳಾದನಂತರ ಬಾಳಾಸಾಹೇಬ ರಾಸ್ತೆ ಎಂಬವನು ತಾಳೀಕೋಟಿಯಲ್ಲಿ ಇರುತ್ತಿದ್ದನು. ಇಲ್ಲಿಯ ಈಶ್ವರನ ಗುಡಿಯು ಪುರಾತನದ್ದಿರುತ್ತದೆ. ಪಂಚಪೀರೆಂಬ ಹೆಸರಿನ ಮಸೀದಿಯೊಂದು ಇರುತ್ತದೆ. ಅದಕ್ಕೆ ಮುಸಲ್ಮಾನರೂ ಹಿಂದೂ ಜನರೂ ಸರಿಯಾಗಿಯೇ ಮಾನ ಕೊಡುತ್ತಾರೆ. ದಿಲ್ಲಿಯಿಂದ ಹೊರಟ ಐವರು ಕಲಿಗಳು ತೆಲಗು ದೇಶದ ಕೊಪೂರರಾಮನ ಕಲಿತನವನ್ನು ಕೇಳಿ, ತಮ್ಮ ರುಂಡಗಳನ್ನು ಚೆಲ್ಲಿ ಅವನೆದುರಿಗೆ ನಿಂತು ಯುದ್ಧಮಾಡಿ, ಹಾಗೇ ತಾಳೀಕೋಟಿಗೆ ಬಂದು ಅದೃಶ್ಯರಾದರಂತೆ.

ವಿಜಯನಗರದ ರಾಮರಾಜನಿಗೂ ಆದಿಲಶಹ ಮುಂತಾದ ಮೂವರು ಬಾದಶಹರಿಗೂ ಒದಗಿದ ಯುದ್ಧವು ಈ ಊರ ದಕ್ಷಿಣಕ್ಕೆ ೩೦ ಮೈಲಿನ

ಮೇಲೆ ಕೃಷ್ಣೆಯ ದಂಡೆಯಲ್ಲಿ ಆಯಿತು. ಆ ಬಾದಶಹರು ತಾಳೀಕೋಟಿ ಯಲ್ಲಿ ತಮ್ಮ ಠಾಣ್ಯವನ್ನು ಇಟ್ಟಿದ್ದರಿಂದ ಆ ಯುದ್ಧಕ್ಕೆ 'ತಾಳೀಕೋಟಿಯ ಯುದ್ಧ'ವೆಂದು ಹೆಸರು ಬಿದ್ದದೆ.

ಇಲ್ಲಿಯ ಮನೆ ಕಟ್ಟುವ ಕಲ್ಲುಗಳು ಪ್ರಸಿದ್ಧ, ಅಲ್ಲದೆ ಇಲ್ಲಿ ಉತ್ತಮ ತರದ ಜಾಜೂಮುಗಳೂ ಕರಳಿಯ ಹಚ್ಚಡಗಳೂ ಸಿದ್ಧವಾಗುತ್ತವೆ.

ಎಲಗೂರು (ಸ. ಸ. ಎತ್ತರ ೧೬೪೨').—ಮುದ್ದೇಬಿಹಾಳದ ಪಶ್ಚಿಮಕ್ಕೆ ೧೩ ಮೈಲಿನ ಮೇಲೆ ಕೃಷ್ಣೆಯ ದಂಡೆಯಲ್ಲಿರುತ್ತದೆ. ಇಲ್ಲಿಯ ಹನುಮಂತ ದೇವರು ಬಹು ಜಾಗೃತನೆಂದು ಪ್ರಸಿದ್ಧಿಯುಂಟು. ಊರ ಹೊರಗೆ ಈ ದೇವರ ಗುಡಿಯನ್ನು ಪಾದಪ್ಪದೇಸಾಯಿ ಎಂಬವನು ಭದ್ರವಾಗಿಯೂ ವಿಸ್ತಾರವಾಗಿ ಯೂ ಕಟ್ಟಿಸಿದ್ದಾನೆ. ಶಿಖರದ ಮೇಲೆ ಹಿತ್ತಾಳಿಯ ಕಳಸವಿರುತ್ತದೆ. ಸುತ್ತ ಲಿನ ಏಳು ಹಳ್ಳಿಗಳಿಗೆ ಈ ಹನುಮಂತನು ಒಬ್ಬನೇ ದೇವರಾದ್ದರಿಂದ ಇವನಿಗೆ ಏಳೂರದಪ್ಪ (ಎಳಗಾರದಪ್ಪ) ಎಂಬ ಹೆಸರು ಬಂದಿದೆ.



—

## ೧೩ನೆಯ ಪ್ರಕರಣ.

### ಜಿಲ್ಹೆಯ ಇತಿಹಾಸ.

ಈ ಜಿಲ್ಹೆಯಲ್ಲಿ ಕೆಲವು ಹಳ್ಳಿಗಳಲ್ಲಿ ದೇವಾಲಯಗಳೂ ಶಿಲಾಲೇಖಗಳೂ ದೊರೆಯುತ್ತವೆ. ಪ್ರಾಚೀನ ಕಾಲದಲ್ಲಿ ಈ ಜಿಲ್ಹೆಯಲ್ಲಿ ಪ್ರಸಿದ್ಧ ರಾಜವಂಶಗಳು ಆಳಿಹೋದ ಕುರುಹುಗಳು ಈಗಲೂ ಇರುತ್ತವೆ. ಚಾಲುಕ್ಯರು ರಾಷ್ಟ್ರಕೂಟರು ಮುಂತಾದವರು ಆಳಿದ ಕೆಲಕಾಲದ ಬಳಿಕ ಅಂದರೆ ಸುಮಾರು ೧೫ನೇ ಶತಮಾನದ ಕಡೆಯ ಭಾಗದಲ್ಲಿ ಈ ಜಿಲ್ಹೆಯು ಮುಸಲ್ಮಾನರ ಅಧಿಕಾರಕ್ಕೊಳಪಟ್ಟಿತು. ಆ ಕಾಲಕ್ಕೆ ಈ ಜಿಲ್ಹೆಯ ವೈಭವದ ಪರಮಾವಧಿಯಾಯಿತು. ಆ ಕಾಲದಲ್ಲಿ ಉಂಟಾದ ಜಗಪ್ರಸಿದ್ಧ ಇಮಾರತುಗಳು ಹಿಂದಿನ ಕಾಲದ ವೈಭವದ ಕುರುಹನ್ನು ತೋರಿಸುತ್ತ ವಿಜಾಪುರದಲ್ಲಿ ಈಗಲೂ ನಿಂತುಕೊಂಡಿವೆ. ಮುಸಲ್ಮಾನೀ ರಾಜ್ಯವು ಇನ್ನೂರು ವರ್ಷಗಳ ವರೆಗೆ ಅವಿಚ್ಛಿನ್ನವಾಗಿ ಬಾಳಿದ ತರುವಾಯ ಈ ಜಿಲ್ಹೆಯು ಸುಪ್ರಸಿದ್ಧ ಬಾದಶಹನಾದ ಔರಂಗಜೇಬನ ಕೈಸೇರಿತು. ೧೮ನೇ ಶತಮಾನವು ಸಮಾಧಾನದ ಕಾಲವಾಗಿದ್ದಿಲ್ಲ. ಮಹಾರಾಷ್ಟ್ರರು, ಇಂಗ್ಲಿಷರು, ನಿಜಾಮನು, ಮೈಸೂರಿನ ಹೈದರನಾಯಕನು ಮುಂತಾದವರೊಳಗೆ ನಡೆದ ಕಲಹಗಳಲ್ಲಿ ಈ ಜಿಲ್ಹೆಯು ಒಮ್ಮೆ ಒಬ್ಬರ ಕಡೆಗೆ ಸೇರಿದರೆ, ಇನ್ನೊಮ್ಮೆ ಮತ್ತೊಬ್ಬರ ಕಡೆಗೆ ಸೇರುವದು. ಸನ್ ೧೮೧೮ರಲ್ಲಿ ಪೇಶವೆಯು ತನ್ನ ಪ್ರಾಂತವನ್ನು ಇಂಗ್ಲಿಷರಿಗೆ ಒಪ್ಪಿಸುವ ವರೆಗೆ ಈ ಜಿಲ್ಹೆಯು ಅವನ ವಶದಲ್ಲಿಯೇ ಇತ್ತು. ಮುಂದೆ ಸಹ ಸನ್ ೧೮೪೮ರ ವರೆಗೆ ಈ ಜಿಲ್ಹೆಯು ಸಾತಾರೆಯ ಅರಸನ ವಶದಲ್ಲಿತ್ತು. ಆ ವರ್ಷ ಅಲ್ಲಿಯ ಅರಸನು ಸಂತತಿಯಿಲ್ಲದೆ ತೀರಲು ಅವನ ರಾಜ್ಯವನ್ನು ಇಂಗ್ಲಿಷ ಸರಕಾರದವರು ತಮ್ಮ ರಾಜ್ಯಕ್ಕೆ ಸೇರಿಸಿಕೊಳ್ಳುವ ಕಾಲಕ್ಕೆ ಈ ಜಿಲ್ಹೆಯೂ ಇಂಗ್ಲಿಷರ ಕೈಸೇರಿತು.

